# ಪ್ರಸ್ತಾವನೆ

## (ನಾಲ್ಕನೆಯ ಮುದ್ರಣ)

ಮೂವತ್ತು ವರ್ಷಗಳ ಹಿಂದೆ ಅಚ್ಚಾದ ಈ ನನ್ನ ಮೊದಲನೆಯ ಪುಸ್ತಕ ಈಗ ನಾಲ್ಕನೆಯ ಆವೃತ್ತಿಯನ್ನು ಕಾಣುತ್ತಿರುವುದು ಮನಸ್ಸಿಗೆ ಹರ್ಷವನ್ನು ತಂದಿದೆ. ಆ ವೇಳೆಗೆ ಶ್ರೀ ಗೊರೂರ್ ಅವರು ಇದರ ಪ್ರಕಟಣೆಯ ಹಿನ್ನೆಲೆಗಿದ್ದರು, ತೀ. ನಂ. ಶ್ರೀ ಅವರು "ಹಣತೆ"ಗೆ ಇದ್ದಂತೆ. ಈ ಬರಹಗಳನ್ನು ನನ್ನ "ಕಾಕರ ಲಿಪಿ"ಯಿಂದ ಉದ್ಧರಿಸಿ ಅಚ್ಚಿಗೆ ಅಣಿಮಾಡಿದವರು ಗೊರೂರ್ ಅವರೇ ಎಂದು ನೆನಪು. ಇವುಗಳ ಬೆಲೆಯ ವಿಷಯದಲ್ಲಿ ನನಗಿಂತಲೂ ಅವರಿಗೆ ಹೆಚ್ಚು ವಿಶ್ವಾಸವಿತ್ತೆಂದು ಕಾಣುತ್ತದೆ. ಇದರ ಎರಡನೆಯ ಮುದ್ರಣದ ಪ್ರತಿಗಳು ತೀರಿದ ಮೇಲೆ ಇನ್ನಿದರ ಸರದಿ ಮುಗಿಯಿತೆಂದು ನಾನಿದ್ದಾಗ ಮೂರನೆಯ ಮುದ್ರಣಕ್ಕೆ ಎತ್ತಿಕೊಂಡು ಈ ನಾಲ್ಕನೆಯ ಮುದ್ರಣಕ್ಕೆ ಅವಕಾಶ ಕಲ್ಪಿಸಿದವರೂ ಅವರೇ. ಸ್ನೇಹವ್ಯಾಪಾರವೇ ಹಾಗೆ. ಈ ಪುಸ್ತಕದಲ್ಲಿನ ಬಂಧಗಳು ಯಾವ ಮೂಲಭಾವಗಳ ಪ್ರೇರಣೆಯಿಂದ ಹುಟ್ಟಿದವೋ ಅವು ಸ್ಪಷ್ಟವಾಗಿ ಸ್ಮರಣೆಗೀಗ ಬರುತ್ತಿಲ್ಲ. ವಿಚಿತ್ರಾನುಭೂತಿಗಳನ್ನು ನುಡಿದೋ ಬರೆದೋ ಹೊರಗೆಡಹಿ ಆದಷ್ಟು ಬೇಗ ಮರೆತು ನನ್ನ ಮನಸ್ಸನ್ನು ಶುದ್ಧಿಮಾಡಿಕೊಳ್ಳುವುದು ನನ್ನ ಸ್ವಭಾವ. ಆಗಿಹೋದದ್ದರ ನೆನಪಿನಲ್ಲೇ ಮನನಟ್ಟಿದ್ದರೆ ಈ ಗಳಿಗೆ ಒದಗಿ ಬರುವ ರಸಾಸ್ವಾದ ಕಷ್ಟ. ರಸಕುತೂಹಲಿ ತನ್ನ ಭುಕ್ತ ಮನಸ್ಸಿಗೆ ಊರ್ವಶಿಯಂತೆ ಮರಮರಳಿ ಕನ್ನೆತನವನ್ನೇ ಬಯಸುತ್ತಾನೆ. ಇದು ಸಹಜ. ಏಕೆಂದರೆ, ನಮ್ಮ ಜೀವಿತಾವಧಿ ಬಹು ಸ್ವಲ್ಪ ; ಪೃಥ್ವಿಯೋ ಬಹು ಸುಂದರಿ, ಬಹು ರಸವತಿ, ಬಹು ಗಹನೆ, ವಿಚಿತ್ರ ಮನೋಹರೆ. ವಿಶ್ವಾತ್ಮನ ಕರುಣೆಯಿಂದ ನಮಗೆ ಈ ಕರಣ ಕಳೇಬರಯೋಗ ಪ್ರಾಪ್ತ

ವಾಗಿದೆ. ಆ ದೈವೀಕಾರುಣ್ಯ ನಮ್ಮಲ್ಲಿ ವಿಫಲವಾಗಬಾರದು. ಈ ಜಗದ್ರಸ ಸಾಕ್ಷಾತ್ಕಾರ ಕೌತುಕ ಮತ್ತು ಕಾತರತೆ ನನ್ನೆಲ್ಲ ಬರಹಗಳ ಪ್ರೇರಕ ಸಾಮಗ್ರಿಯಾಗಿ ನನ್ನನ್ನು ಈವರೆಗೆ ನಡೆಸಿಕೊಂಡು ಬಂದಿರುವಂತೆ ತೋರುತ್ತದೆ. ಆ ಕೌತುಕದ ಪ್ರಥಮ ಫಲ "ರಾಮಾಚಾರಿಯ ನೆನಪು" ಎನ್ನಬಹುದು.

ನಿಜವಾಗಿ ಹೇಳಬೇಕಾದರೆ, ಈ ಪುಸ್ತಕ ಇಷ್ಟು ಕಾಲ ಬದುಕಬಲ್ಲುದೆಂದು ನಾನು ಊಹಿಸಿರಲಿಲ್ಲ; ಇನ್ನೂ ಎಳಕಿನ ಬರಹಗಳೆಂದು ಇವಕ್ಕೆ ಅಷ್ಟು ಪ್ರಾಶಸ್ತ್ಯವನ್ನೂ ಕೊಟ್ಟಿರಲಿಲ್ಲ. ನನ್ನ ಕೃತಿಗಳಲ್ಲೇ ನನಗೆ ಅಚ್ಚುಮೆಚ್ಚಾದ ಲೇಖನಗಳು ಬೇರೆಯವು. 'ಧ್ವಜರಕ್ಷಣೆ'ಯಲ್ಲಿನ "ವಿಷಾದಯೋಗ", "ಕಾಲದೊಡನೆ ಅಶ್ವತ್ಥನ ಸ್ಪರ್ಧೆ", "ಕೊಳಂದೆ", 'ರಥಸಪ್ತಮಿ'ಯಲ್ಲಿನ "ಮಳೆ" ಮತ್ತು "ಬೀದಿಯ ಬಸವ"; 'ಈಚಲು ಮರದ ಕೆಳಗೆ' ಎಂಬ ಪುಸ್ತಕದ "ಭೀತಿ ಮೀಮಾಂಸೆ", "ಗರಳರಕ್ಷೆ", "ಹಣ-ನೋಟು" ಇತ್ಯಾದಿ ಬಂಧಗಳು. ಆದರೆ ಇವುಗಳ ವ್ಯಾಪ್ತಿ ಬಹಳ ಕಡಮೆ. ಓದುಗರ ಇಷ್ಟ ಮತ್ತು ನನ್ನ ಇಷ್ಟ ಇವು ಒಂದೇ ಆಗುವುದು ಒಂದು ಅದೃಷ್ಟವಿಶೇಷವೇ ಸರಿ. ಅಲ್ಲದೆ, ನನ್ನೊಲವು ಗದ್ಯಕ್ಕಿಂತ ಪದ್ಯದತ್ತ; ಇತ್ತೀಚೆಗೆ ಸ್ವರರಚನೆಗಳತ್ತ. ಒಂದು ಖಂಡುಗದಷ್ಟು ಗದ್ಯದಲ್ಲಿ ಹೇಳಬೇಕಾಗುವುದನ್ನು ಒಂದು ಬಳ್ಳದಷ್ಟು ಪದ್ಯದಲ್ಲಿ ಹೇಳಬಹುದು, ಒಂದು ಮಾನದಷ್ಟು ಸ್ವರಲಹರಿಯಲ್ಲಿ ಅಳವಡಿಸಬಹುದು. ಛಂದೋಬಂಧಗಳ ಹೃದಯಗರ್ಭದಲ್ಲಿ ಪರಾಗದಂತಿರಬಯಸುತ್ತದೆ ಭಾವ, ಅನೇಕ ಪುಷ್ಪೋದ್ಯಾನಗಳ ಕಣಸನ್ನು ಹೊತ್ತು. ಆದರೆ ಈ ವೈಚಿತ್ರ್ಯಕ್ಕೇನು ಹೇಳೋಣ, ಪದ್ಯಗಳೆಲ್ಲ ಬದುಕಿರುವುದು ಗದ್ಯದಿಂದಲೇ. ಜನಸಾಮಾನ್ಯರ ಮನಸ್ಸಿನ ವಿಪುಲವೇದಿಕೆ, ಅದರಲ್ಲಿ ರಸಿಕ ಜನಚಿತ್ತ ಕುಟ್ಟಿಮ, ಅದರ ಮೇಲೆ ರಸಸರಸ್ವತಿಯ ನಾಟ್ಯ. ಈ ವೇದಿಕೆ-ಈ ಕುಟ್ಟಿಮ ಗದ್ಯಮಯ. ಪದ್ಯವನ್ನು ಬಿಡಿಸಿ ಅದರ ಸ್ವಾರಸ್ಯವನ್ನು ತಿಳಿಯಹೇಳಬೇಕಾದರೆ ಗದ್ಯವೇ ಬೇಕು. ಹೀಗೆ ಗದ್ಯ ಎತ್ತಿ ಆಡಿಸಿದ ಪದ್ಯ ಪುನಃ ಸ್ವಸ್ಥಿತಿಯನ್ನು

ಪಡೆದು ಅವಿಕೃತವಾಗಿ ಸ್ವಸ್ವರೂಪದಲ್ಲೇ ರಸಿಕನ ಮನಸ್ಸಿನಲ್ಲಿ ನಿಲ್ಲ ಬೇಕಾದರೆ ಅದರೊಳಗೆ ಸ್ಥಿತಿಸ್ಥಾಪನಾಶಕ್ತಿ ಮಹತ್ತರವಾಗಿರಬೇಕಾಗು ತ್ತದೆ. ಯಾವ ಅರ್ಥವಿವರಣೆಗೂ ಸಂಪೂರ್ಣವಾಗಿ ತನ್ನ ಸ್ವಾರಸ್ಯವನ್ನು ತೆರದಿರುವಿಕೆ, ತನ್ನ ನೈಜಛಂದೋಬದ್ಧರೂಪದಿಂದಲೇ ಅದನ್ನು ಸಹೃದಯರ ವಿಶಿಷ್ಟದೃಷ್ಟಿಗೆ ಹೊರಜೊಳಸುವಿಕೆ–ಇದೇ ಅದರ ಸ್ವಾಸ್ಥ್ಯರಕ್ಷಣೋಪಾಯ. ಒಳ್ಳೆಯ ಪದ್ಯ ಗದ್ಯದತ್ತ ಮೂಗು ಮುರಿಯುವುದು ತನ್ನ ಈ ಸ್ವರೂಪ ರಕ್ಷಣೆಯ ಸಾಮರ್ಥ್ಯದಿಂದ. ಪರಿಸ್ಥಿತಿ ಹೀಗಿದ್ದರೂ ಪದ್ಯ ಉಳಿಯಬೇಕಾದರೆ ಗದ್ಯದ ವ್ಯಾಖ್ಯಾನವನ್ನೂ ವೃತ್ತಿಯನ್ನೂ ಆಶ್ರಯಿಸಿಯೇ. ಪದ್ಯದತ್ತ ತಿರುಗದೆಯೇ ಈ ವ್ಯಾಖ್ಯಾನಗಳನ್ನೇ ಅವಲಂಬಿಸಿ ಕಾವ್ಯಾಸ್ವಾದನೆ ಮಾಡಿದೆವೆನ್ನುವ ಚತುರರು, ಅದರಲ್ಲೂ ವಿದ್ಯಾರ್ಥಿ ವರ್ಗದಲ್ಲಿ, ಬಹಳ ಉಂಟು. ಕವಿಯಾದವನು ಕೆಲವು ವೇಳೆ ಗದ್ಯ ರಚನೆಗೆ ಕೈಹಾಕುವುದು ಸಹೃದಯರ ಒಲವು ತನ್ನ ಪದ್ಯಗಳತ್ತ ಹರಿಯುವುದು ಕ್ಷೀಣವಾದಾಗ, ಅವರ ಗಮನವನ್ನು ತನ್ನ ವಿಶಿಷ್ಟ ವ್ಯಕ್ತಿತ್ವದತ್ತ ಸೆಳೆಯುವ ಸಲುವಾಗಿ, ಅಥವಾ ಆಳ ಎತ್ತರಗಳನ್ನು ಅಷ್ಟಾಗಿ ಅಪೇಕ್ಷಿಸದೆ ತೆಳ್ಳನೆ ಹಗುರವಾಗಿ ಭಾವಗಳು ಸ್ವಚ್ಛಂದ ಲಹರಿಯಲ್ಲಿ ಹರಿದಾಡಬಿಡಲು ಬಯಸಿದಾಗ. "ರಾಮಾಚಾರಿಯ ನೆನಪು" ಎರಡನೆಯ ಬಯಕೆಗೆ ಸಾಕ್ಷಿಯಾಗಿ ನಿಂತಿದೆ.

ಇಲ್ಲಿರುವ ಬರಹಗಳು ಒಂದು ಮುಖದಲ್ಲಿ ಪ್ರಬಂಧಗಳನ್ನು ಹೋಲು ತ್ತವೆ, ಮತ್ತೊಂದು ಮುಖದಲ್ಲಿ ಕಥೆಗಳಂತಿವೆ. ಒಂದು ಕಡೆ "ಕೃಷ್ಣ ಶಾಸ್ತ್ರಿಯ ತ್ಯಾಗ" ಎಂಬುದು ಕಥೆಯತ್ತ ತೀರ ವಾಲಿದರೆ ಮತ್ತೊಂದು ಕಡೆ "ಹ ಹ್ಹಾ, ಒಂದು ನಕ್ಷತ್ರ" ಎಂಬುದನ್ನು ಒಂದು ಲಘು ಪ್ರಬಂಧ ವೆಂದೇ ಕರೆಯಬಹುದು. ಆದರೂ ಇಲ್ಲಿನ ಬಂಧಗಳ ಕಥಾರೂಪವಾಗಲಿ ಪ್ರಬಂಧರೂಪವಾಗಲಿ ಆಯಾ ಜಾತಿಗೆ ಸೇರುವಷ್ಟು ಸ್ಪಷ್ಟವಾಗಿಲ್ಲ. ಈ ಕೃತಿಗಳ ಸೊಗಡು ಬೇರೆ ಜಾತಿಯದು. ಇವುಗಳೊಡನೆ ನನ್ನ ಇನ್ನೆರಡು ಬರಹಗಳು ನ್ಯಾಯವಾಗಿ ಹೊಂದಿಕೊಳ್ಳುತ್ತವೆ; ಅವು ನನ್ನ ಇತರ ಗದ್ಯ ಸಂಕಲನಗಳಲ್ಲಿ ಕಾಣಬರುವ "ನೌಕಾಚಂದ್ರ" ಮತ್ತು "ಕೊಳದ ತಡಿಯಲ್ಲಿ"

ಎಂಬ ರಚನೆಗಳು. ಗದ್ಯದಲ್ಲಿ ಇವುಗಳದೊಂದು ಹೊಸ ಪ್ರಕಾರ. ಹೊಸ ಪ್ರಕಾರವಾದುದರಿಂದ ಹೊಸ ಹೆಸರೊಂದು ಇವಕ್ಕೆ ಬೇಕಾಯಿತು. ಅದಕ್ಕೋಸ್ಕರ ಇವನ್ನು "ಭಾವನಾಚಿತ್ರಗಳು" ಎಂದು ಕರೆದಿದೇನೆ. ಈ "ಭಾವನಾಚಿತ್ರ"ಗಳ ವೈಶಿಷ್ಟ್ಯವೇನೆಂದರೆ, ಇವುಗಳಲ್ಲಿ ಬರುವ ಉತ್ತಮ ಪುರುಷ ವಾಚ್ಯನಾದ "ನಾನು" ಎಂಬ ವ್ಯಕ್ತಿ ಬರಹಗಾರನೂ ಅಲ್ಲ, ಅಲ್ಲದೆಯೂ ಇಲ್ಲ. ಕನಸಿನಲ್ಲಿ ನಮ್ಮನ್ನು ನಾವೇ ವಿಷಯೀಕರಿಸಿಕೊಂಡು ಅನೇಕ ಪರಿಸರಗಳಲ್ಲಿ ಅನೇಕ ಪಾತ್ರಧಾರಿಗಳಾಗಿ ಆಯಾಕರ್ಮಗಳನ್ನೆಸಗುತ್ತಾ ಆಯಾ ಅನುಭೂತಿಗಳನ್ನು ಅನುಭವಿಸುತ್ತಾ ವ್ಯವಹರಿಸುತ್ತೇವೆ ಅಲ್ಲವೆ. ಅಲ್ಲಿ ನನ್ನನ್ನು ಪ್ರತಿನಿಧಿಸುವ ಪಾತ್ರವಿಶೇಷಗಳೂ ನಾವೂ ಒಂದೇ ಆದರೂ ವಿಭಿನ್ನರು. ಎಚ್ಚರುವಾಗ ಅವುಗಳೆಲ್ಲ ಬಂದು ನಮ್ಮಲ್ಲಿ ಸೇರಿಕೊಂಡು ಬಿಡುತ್ತವೆ; ತಾವು ಉದ್ಬೋಧಿಸಿದ ಭಾವವನ್ನು ಮಾತ್ರ ಉಳಿಸಿ ಲಯವಾಗುತ್ತವೆ. ಎಚ್ಚರದ ಸಮಯದಲ್ಲಿ ಹೀಗೆ ಭಿನ್ನಾಭಿನ್ನರಾಗಿ ನಾವು ವರ್ತಿಸುವುದು ಕಷ್ಟ; ಅದಕ್ಕೆ ಚಾಣಕ್ಯನಂಥವನ ಕೌಶಲಬೇಕು, ಇಲ್ಲ ಒಂದಕ್ಕೊಂದಕ್ಕೆ ತೀರ ಭಿನ್ನವಾದ ಪರಿಸರಗಳು ನಮ್ಮನ್ನು ತಮತಮಗೆ ತಕ್ಕಂತೆ ನಾದುತ್ತಿರಬೇಕು—ಭಾರತದಲ್ಲಿ ನಮ್ಮಿಂದಿನ ಪರಿಸ್ಥಿತಿಯ ಹಾಗೆ.

ಆದರೆ ಕನಸಿನಲ್ಲಿ ಇದು ಸುಲಭ. ಅಂಥ ಒಂದು ಭಿನ್ನಾಭಿನ್ನತೆಯನ್ನು ಈ "ಭಾವನಾಚಿತ್ರ"ಗಳ ಪಾತ್ರಗಳು ದ್ಯೋತಿಸುತ್ತವೆ ಎಂದು ನನಗೆ ತೋರುತ್ತದೆ. ನಾನೆ ಎನ್ನುವಂತಿದೆ, ಆದರೆ ನಾನಲ್ಲ—ಈ ರೀತಿಯಿದೆ ಇಲ್ಲಿನ ವ್ಯಕ್ತಿಗಳ ಪರಿಸ್ಥಿತಿ. ನಿಜವಾದ ಪ್ರಬಂಧಗಳಲ್ಲಾದರೋ ನಾನು ನಾನೇ. ನನಗೂ ಓದುಗರಿಗೂ ನೇರ ಸಂಪರ್ಕವುಂಟು. ಸ್ನೇಹ ಭಾವದಿಂದ ನನ್ನ ಅಂತರಂಗವನ್ನೂ ಮಾನಸೋಲ್ಲಾಸವನ್ನೂ ವ್ಯಕ್ತಗೊಳಿಸಿ ನನ್ನ ನಿಮ್ಮ ಆತ್ಮೀಯತೆಯನ್ನು ಬೆಳೆಸಿಕೊಳ್ಳುವುದು ಅಲ್ಲಿನ ಕಲಾ ರಹಸ್ಯ. ಪ್ರಬಂಧಗಳ ಸ್ವಾರಸ್ಯವೆಲ್ಲ ಈ ಉತ್ತಮಪುರುಷನ ವ್ಯವಹಾರದಲ್ಲಡಗಿದೆ—ಆತನ ಅನುಭವಗಳ ನೂತನತೆ, ನೋಟದ ಹೊಳಪು, ನುಡಿಯ ಚದುರು ಇವು ಅಲ್ಲಿನ ಆಕರ್ಷಕ ಸಾಮಗ್ರಿ. ಕತೆಗಳಲ್ಲಾದರೋ,

ಅಲ್ಲಿ ಒಮ್ಮೊಮ್ಮೆ ಬರುವ ಉತ್ತಮಪುರುಷವಾಚ್ಯನಾದ "ನಾನು" ಎಂಬ ಕಥಕನಿಗೂ ಆ ಕತೆಯನ್ನು ಬರೆಯುವ ಕತೆಗಾರನಿಗೂ ಯಾವ ವಿಧವಾದ ತಾದಾತ್ಮ್ಯ ಸಂಬಂಧವೂ ಇಲ್ಲ. ಆ ಕತೆಯಲ್ಲಿನ ಪಾತ್ರ ಸನ್ನಿವೇಶಗಳಿಂದಲೇ ಕಥಕನ ಸ್ಪಷ್ಟ ಚಿತ್ರ ನಮಗೆ ಗೋಚರಿಸುವುದು; ಅವುಗಳಿಂದಲೇ ಆತ ದೃಶ್ಯ, ಅವುಗಳೊಡನೆಯೇ ಅದೃಶ್ಯ—ಕತೆ ಕಾಡಿಗೆ ಹೋಯಿತು, ನಾವು ಊರಿಗೆ ಬಂದೆವು ಎಂಬಂತೆ. ಕತೆ ಹೇಳುವವ ಎಂದರೆ ಕಥೆಯ ಉತ್ತಮ ಪುರುಷವಾಚ್ಯ, ಮತ್ತು ಕತೆಗಾರ ಎಂದರೆ ಆ ಕಥೆಯ ನಿರ್ಮಾತೃ ಇವರಿಗೆ ಸ್ವಪ್ನದಲ್ಲಿ ಕಾಣಬರುವ ಭಿನ್ನಾಭಿನ್ನ ಸಂಬಂಧವಿಲ್ಲ, ಅವರಿಬ್ಬರೂ ಪ್ರತ್ಯೇಕ ವ್ಯಕ್ತಿಗಳು. ಇಲ್ಲಿ ಕತೆಗಾರ ಪರಬ್ರಹ್ಮನ ಹಾಗೆ, ಸರ್ವಸಾಕ್ಷಿ, ಅಷ್ಟೆ. ಹೀಗೆ, ಪ್ರಬಂಧಗಳಲ್ಲಿ ಬರುವ ನಾನು ನಾನೇ, ಕತೆಗಳಲ್ಲಿ ಆಗಾಗ ಬರುವ "ನಾನು" ನಾನಲ್ಲವೇ ಅಲ್ಲ; ಆದರೆ ಈ ಭಾವನಾಚಿತ್ರಗಳಲ್ಲಿ ಬರುವ ನಾನು—ಹಾಗೂ ಇತರ ಪಾತ್ರಗಳೂ ಕೂಡ—ನಾನೂ ಹೌದು, ನಾನಲ್ಲವೂ ಅಲ್ಲ. ಹಾಗಾದರೆ ಇವೆಲ್ಲ ಒಂದೊಂದು ಕನಸಿನ ವರ್ಣನೆಯೇ ಎಂದರೆ, ಹಾಗಲ್ಲ. ಬರಹದ ಉದ್ದಕ್ಕೂ ಒಂದು ಭಾವ ಜೀವಂತವಾಗಿ ತದುಚಿತವಾದ ಅಂಗಾಂಗಗಳನ್ನು ಪಡೆದು ಅಭಿವ್ಯಕ್ತವಾಗುವುದರಿಂದ. ಕನಸಿಗೆ ಈ ಸಾಂಗತ್ಯವಿಲ್ಲ, ಒಂದು ಭಾವದ ಪ್ರಚೋದನೆಯಿಂದ ಒಂದು ಗುರಿಯತ್ತ ಸಾಗುವ ನಡಗೆಯಿಲ್ಲ. ಇವನ್ನು ಹೋಲಿಸಬಹುದಾದರೆ, ಆಗತಾನೆ ಗರಿ ಕೆದರಿ ರೆಕ್ಕೆ ಬಿಚ್ಚಲು ಕಲಿತಿರುವ ಎಳಹಕ್ಕಿ ಗೂಡನ್ನು ಬಿಟ್ಟು ಹೊರಬಂದು ಆ ಸನಿಹದಲ್ಲೇ ಹಾರಾಡುವ ಕೌತುಕದ ಪರಿಸ್ಥಿತಿ ಭಾವನಾಚಿತ್ರಗಳ ಪರಿಸ್ಥಿತಿ. ಇನ್ನು ಇದನ್ನು ವಿಶ್ಲೇಷಿಸುತ್ತಾ ಹೋಗುವುದರಿಂದ ಏನು ಪ್ರಯೋಜನ? ಬಂಧಗಳೇ ಮುಂದಿವೆಯಲ್ಲ. ಅವುಗಳತ್ತ ನಮ್ಮ ಗಮನವನ್ನು ಈಗ ಸ್ವಲ್ಪ ಹರಿಸೋಣ.

"ರಾಮಾಚಾರಿಯ ನೆನಪು" ಹೇಗೆ ಮೂಡಿ ಬರವಣಿಗೆಗಿಳಿಯುವಷ್ಟು ಮೊನಚುಗೊಂಡಿತೋ ಕಾಣೆ. ಇದರ ಮೂಲ ನನ್ನ ಎಳತನದ ಇಂಗ್ಲಿಷ್

ಲೇಖನವೊಂದರಲ್ಲಿತ್ತೋ ಏನೋ. "ರತ್ನಂ" ಕತೆಯ ಮೂಲ ಇಂಗ್ಲಿಷಿನಲ್ಲಿ ತ್ತೆಂದು ನನಗೆ ಈಗ ನಂ. ಶಿವರಾಮಶಾಸ್ತ್ರಿಗಳು ಜ್ಞಾಪಿಸಿದರು. ಅಹುದು. "Personal Reflections" ಎಂಬ ನನ್ನ ಇಂಗ್ಲಿಷ್ ಬರಹಗಳ ಪುಸ್ತಕಗಳೆ ರಡು ನನ್ನಲ್ಲಿದ್ದವು. ಅವೀಗ ಕಳೆದುಹೋಗಿವೆ. ಅದರಿಂದ ನನಗೆ ಕಿಂಚಿತ್ತೂ ನಿರ್ವೇದವಿಲ್ಲ. ಅಲ್ಲಿನ ಕೆಲವು ಬರಹಗಳನ್ನು ಕನ್ನಡಿಸಿ ಈ ಭಾವನಾಚಿತ್ರಗಳ ರೂಪಕ್ಕೆ ತಂದೆನೋ ಏನೋ. "ರಾಮಚಾರಿಯ" ಮೂಲ ಹೀಗೆ ಇಂಗ್ಲಿಷಿನಲ್ಲಿ ಇದ್ದಿರಬೇಕು. ಏಕೆಂದರೆ ಕನ್ನಡದ ಬರವಣಿಗೆಯ ಕಾಲಕ್ಕೆ ಆತ ತೀರಿಕೊಂಡು ಹಲವು ವರ್ಷಗಳಾಗಿ ಆ ಕೊರಗು ಮಾಗಿತ್ತು; ವೇದನೆ ನೆನೆದು ಹಲುಬುವಷ್ಟು ತೀವ್ರವಾಗಿರಲಿಲ್ಲ. ಆದರೆ ಆ ಲೇಖನದ ಮೊದಲನೆಯ ವಾಕ್ಯ ಸತ್ಯ. ಈ ಪುಸ್ತಕ ಯಾವ ನಾಲ್ವರು ಜೀವದ ಗೆಳೆಯರಿಗೆ ನಿವೇದಿತವಾಗಿದೆಯೋ ಅಂಥ ಸ್ನೇಹ ನನಗೆ ಬಾಲ್ಯದಲ್ಲಿ ದೊರತೇ ಇರಲಿಲ್ಲವೆಂದು ಹೇಳಬೇಕು, "ರಾಮಾಚಾರಿ" ಮತ್ತು ಅಂಥ ಒಬ್ಬಿಬ್ಬರ ಹೊರತು. ಸುದೈವದಿಂದ ಈ ನಾಲ್ವರೂ ಬದುಕಿದ್ದಾರೆ; ಎಂದಿನಂತೆ ನನ್ನನ್ನು ವಿಶೇಷವಾದ ಮಮತೆಯಿಂದ ಕಾಣುತ್ತಿದ್ದಾರೆ. ವಯಸ್ಸಿನಿಂದ ಈ ಸ್ನೇಹಭಾವಕ್ಕೆ ಏನೂ ತಾರತಮ್ಯಗಳೇರ್ಪಟ್ಟಿಲ್ಲ. ಅದೊಂದು ಭಾಗ್ಯ. "ರಾಮಾಚಾರಿ" ಬದುಕಿದ್ದರೆ ಈ ಸ್ನೇಹವರ್ಗಕ್ಕೆ ಸೇರುತ್ತಿದ್ದನೋ ಏನೋ ಹೇಳಲಾರೆ. ಆತನದು ಬಲಿಯಲಾರದ ಮನಸ್ಸು. ನನ್ನ ಎಳಮನಸ್ಸಿಗೆ ಆ ಎಳಮನಸ್ಸು ಬಹು ಮಧುರವಾಗಿ ಹೊಂದಿಕೊಂಡಿತ್ತು. ಆತ ಸ್ವಭಾವತಃ ಉದಾರ; ಆದರೆ ಪ್ರಮುಖನಾಗುವ ಗುಣ ಆತನಲ್ಲಿರಲಿಲ್ಲ. ಆದುದರಿಂದಲೋ ಏನೋ, ಆತ ಪ್ರಾಮುಖ್ಯಕ್ಕೆ ಯಾವಾಗಲೂ ಹಂಬಲಿಸುತ್ತಾ ತನ್ನ ಔದಾರ್ಯ ಗುಣವನ್ನು ಅದಕ್ಕೆ ಮೇಟಿ ಹಾಕಿದ್ದ. ಆಗ ಅವನ ಈ ಸ್ವಭಾವ ನಮಗೆ ನಗು ತರುತ್ತಿತ್ತು; ಈಗ ಕನಿಕರ ಉಕ್ಕಿಸುತ್ತದೆ. ಇವನ ನೆನವಿನ ಜತೆಗೆ ನಲವತ್ತು ವರುಷಗಳ ಹಿಂದಣ ನಮ್ಮೂರ ಚಿತ್ರ ಇಲ್ಲಿನ ಕೆಲವು ರೇಖೆಗಳಲ್ಲಿ ವ್ಯಕ್ತವಾಗಿದೆ. ಈಗ ಊರಿನ ಹದ ಬೇರೆ ತರದ್ದು; ಆ ಹಸುರು ಬಯಲು ಈಗ ಕಾಣದು. ಈಗಲ್ಲಿ ಬೇರೆ ಮುಖಗಳು; ಬೇರೆ ತರದ ಆಟ ಕೂಟ

ವಿನೋದಗಳು, ಬೇರೆ ತರದ ಬಗೆಯೋಟ. ಈ ದಡದಲ್ಲಿ ನಿಂತು ಆ ದಡವನ್ನು ನೋಡುವವರಿಗೆ ಅಲ್ಲಿನ ಹಸುರು ಹೆಚ್ಚು ದಟ್ಟವಾಗಿ ಕಾಣುವುದು ಸಹಜ. ಜಾಗೃತಸ್ಮೃತಿ ಮತ್ತು ರಾಗಾಂಕಿತ ಭಾವಗಳು ವಾಸ್ತವಾಂಶವನ್ನು ನಾದಿ ನಾದಿ ಚೆಲುವಾಗಿಸುತ್ತವೆ, ಸುತ್ತ ಪ್ರಭಾವಲಯವನ್ನು ಕಟ್ಟುತ್ತವೆ. ಹಾಗೆಯೇ ಈ ನನ್ನ ಮಿತ್ರ "ರಾಮಾಚಾರಿ" ವಾಸ್ತವದ ಪ್ರತೀಕ ಮಾತ್ರವಲ್ಲ; ನನ್ನೆಳತನದ ಹೊಂಗನಸುಗಳ ಕೇಂದ್ರ ಬಿಂದು.

"ಕೃಷ್ಣಶಾಸ್ತ್ರಿಯ ತ್ಯಾಗ"ಕ್ಕೂ ಸ್ವಲ್ಪ ಸ್ವಾನುಭೂತಿಯ ತಳಹದಿಯುಂಟು. ಯಾರೋ ಒಬ್ಬರು ಹಿರಿಯರ ವಿಚಾರದಲ್ಲಿ ನಾನು ಅಸಮಾಧಾನತಾಳಿ ಮನಸ್ಸಿನಲ್ಲೆ ಅವರನ್ನು ಶಪಿಸಿ ಕೇಡೆಣಿಸಿದ ವೇಳೆಯಲ್ಲೆ ಆತ ಅಕಸ್ಮಾತ್ತಾಗಿ ಖಾಯಿಲೆ ಬಿದ್ದು ಅದರಿಂದವರು ಚೇತರಿಸಿಕೊಳ್ಳುವವರೆಗೆ ನಾನು ಅವರ ಉಪಚಾರದಲ್ಲಿ ಒದ್ದಾಡಿದ ಪ್ರಸಂಗ ಈಗ ಈ ಕತೆಯ ರೂಪದಲ್ಲಿ ಹೊಳಹು ಹಾಕಿದೆ. ವಾಸ್ತವಾಂಶದ ತಳಹದಿ ಹೀಗಿದ್ದರೆ ಅದರ ಮೇಲೆ ನಾನು ಕಟ್ಟಿರುವ ಕನಸಿನ ಮನೆ ತೀರ ಬೇರೆ ತರದ್ದು. ಇದರಲ್ಲಿ ನನಗೆ ಪ್ರಿಯವಾದ ಭಾಗ ಯಾವುದೆಂದರೆ ಕಥಾನಾಯಕ ಒಲೆಯ ಮುಂದೆ ಕುಳಿತು ಕನಸು ಹೆಣೆಯುವ ರೀತಿ. ಈಗ ಈ ಬಗೆಯ ಭೋಗ ನಮಗೆ ಲಭ್ಯವಿಲ್ಲ; ಏಕೆಂದರೆ, ಅಡಿಗೆಯ ಮನೆಯಲ್ಲಿ ಈಗ ಒಂದು ವೇಳೆ ಕೆಂಡವಿದ್ದರೂ ಉರಿಯಿರುವುದಿಲ್ಲ; ಉರಿಯಿದ್ದರೆ ಅದು ತೆರೆದೊಲೆಯ ಕಟ್ಟಿಗೆಯಿಂದ ಏಳುವಂಥದಲ್ಲ, ಲೋಹದ ಬಲೆಯಲ್ಲಿ ಬುಸುಗುಟ್ಟಿ ವಿಷಕಾರುವ ಸೀಮೆಯೆಣ್ಣೆಯುರಿ; ಇಲ್ಲದಿದ್ದರೆ ವಿದ್ಯುಚ್ಛಕ್ತಿಯಿಂದ ಕಾದು ಕೆಂಪಾಗಿ ಅಮೂರ್ತವಾಗಿರುವ ಸುರುಳಿ ತಂತಿಯ ಕಾವು. ಅಡಿಗೆಮನೆಯ ಕೊಳ್ಳಿಯೊಲೆಯ ಮುಂದೆ ಕುಳಿತು ಕಳಕಳಿಸುವ ಕೆಂಡದ ಮೇಲೋ ಉರಿಯುವ ಪುರುಳೆಯ ಮೇಲೋ ತುಪ್ಪದ ಹನಿಗಳನ್ನು ಬೊಟ್ಟು ಬೊಟ್ಟಾಗಿ ಹನಿಸುತ್ತಾ, ಆ ಕಂಪನ್ನು ಆಘ್ರಾಣಿಸುತ್ತಾ, ಆ ಹೊಗೆಯೆಸಳು ಮೇಲೇರಿ ಹೋಗುತ್ತಿರುವಾಗ, ಊರ್ವಶಿಯ ಸೆರಗನ್ನು ಸೆಳೆದು ನಿಲ್ಲಿಸಲು ಹವಣಿಸುವ ಪುರೂರವನಂತೆ, ಅಗ್ನಿಶಿಖೆ ನಿಮಿರಿ ಅದನ್ನು ತುಸದೂರ ಅನುವರ್ತಿಸಿ ಖಿನ್ನ

ವಾಗಿ ಮರಳಿ ಕೊಳ್ಳಿಯಲ್ಲೋ ಕೆಂಡದಲ್ಲೋ ಉಡುಗುವುದನ್ನು ಗಮನಿಸುತ್ತಾ ತಾನೂ ಆ ವೈಶ್ವಾನರಧ್ವಜದಂತೆ ಕೆಂಡದ ಮೇಲಿಂದೆದ್ದು ಮುಕ್ತನಾಗಿ ಮನಬಂದಂತೆ ಸರಿದು ಬಾನತ್ತ ಏಕೆ ಪಯಣಿಸಬಾರದು ಎಂದು ಹಾತೊರೆಯುವ ಯೋಗ ಸ್ಮೃತಿಭೋಗ ಮಾತ್ರವಾಗಿ ಉಳಿದಿದೆ.

"ರತ್ನ"ಳ ಕತೆ ತರುಣರ ಮನಸ್ಸಿಗೆ ಪ್ರಿಯವಾಗಬಹುದು. ಅದರಲ್ಲಿ ಬರುವ ಕನಸಿನ ವರ್ಣನೆ ಮಾತ್ರ ನಾನು ಕಂಡು ಕಳವಳಗೊಂಡ ಕನಸಿನ ವಾಸ್ತವ ವರ್ಣನೆ. ಅದು ನಿಜವಾಗಿ ಮೈನಡುಗಿಸುವಂಥ ಕಮರಿ. ಸ್ಯಮಂತಕ ಮಣಿಯನ್ನು ಅರಸುತ್ತಾ ಕೃಷ್ಣ ಜಾಂಬವಂತನ ಗುಹೆಯನ್ನು ಹೊಕ್ಕು ತೊಟ್ಟಿಲಿನ ಮೇಲೆ ದೇದೀಪ್ಯಮಾನವಾಗಿ ಬೆಳಗುತ್ತಿದ್ದ ಆ ರತ್ನದ ಮೇಲೆ ತನ್ನರಳುಗಂಗಳ ನೋಟವನ್ನು ಚೆಲ್ಲಿದಂತೆ, ಕತ್ತಲೆ ಮುಸುಕಿದ್ದ ಆ ಕಮರಿಯೊಳಕ್ಕೆ ಬೆಳುದಿಂಗಳು ಮೆಲ್ಲನೆ ಸರಿದು ಅದರೊಳಗಿನ ಅರೆಗಲ್ಲೊಂದರ ಮೇಲೆ ಕುಳಿತಿದ್ದ ಕನ್ಯಾ ರತ್ನಳ ಮೇಲೆ ಬಿದ್ದ ನೋಟ ಈಗಲೂ ನನ್ನ ಮನಸ್ಸನ್ನು ತುಸ ಚಲಿಸುವಂತೆ ಮಾಡುತ್ತದೆ. ಜಾಗ್ರದವಸ್ಥೆಯಲ್ಲಿ ಋತನಿಯತವಾದ ಜಗತ್ತಿನಿಂದ ನಾವು ಪಡೆದುಕೊಳ್ಳುವ ಭವಭಾವಾನುಭವ ಎಷ್ಟು ನಿಜವೋ ಸ್ವಪ್ನಾವಸ್ಥೆಯಲ್ಲಿ ಅನೃತ ಜಗತ್ತಿನಿಂದ ನಾವು ಪಡೆಯುವ ಭವಭಾವಾನುಭವ ಅಷ್ಟೆ ನಿಜ. ರಸಸ್ಥಿತಿಯ ವಿಚಾರ ಬೇರೆ. ಅಲ್ಲಿ ಭವಭಾವಾನುಭವಗಳು ಸ್ವಸ್ವರೂಪವನ್ನು ಕಳೆದುಕೊಳ್ಳುತ್ತವೆ, ಆನಂದದ ಪ್ರಕಾರಗಳಾಗುತ್ತವೆ. ಇದು ಇಲ್ಲಿನ ಕನಸಿನ ವರ್ಣನೆಯಿಂದ ಈಗ ನಾನು ಹೆಕ್ಕಿಕೊಳ್ಳುವ ತತ್ತ್ವ. ಈ ಕತೆಯ ನಾಯಕನ ವಿಷಯದಲ್ಲಿ ಪ್ರಣಯ ಪ್ರಗಲ್ಭರಾದ ಆಧುನಿಕ ಯುವಕ ಯುವತಿಯರ ಮನೋಭಾವವೆಂತೋ ನಾನರಿಯೆ.

"ರಂಗರಾಯ ಸಂಗೀತ ಕೇಳಿದ್ದು" ಎಂಬುದರ ಹಿನ್ನೆಲೆ ಮರೆತು ಹೋಗಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಸಂಗೀತದ ವರ್ಣನೆ. ಆಗ ಎಲ್ಲ ಎಳೆಯ ವಯಸ್ಸಿನವರಿಗಿರುವಂತೆ ರಾಗಾಲಾಪನೆಯಲ್ಲಿ ನನಗೆ ಮೋಹ ಹೆಚ್ಚಾಗಿತ್ತು. ಮೃದಂಗದ ಸ್ವಾರಸ್ಯವನ್ನೇ ಆಗ ನಾನರಿತಿರಲಿಲ್ಲ.

ಸಂಗೀತವಿರುವುದೆಲ್ಲ ನಮ್ಮ ಭಾವನೆಗಳಿಗೆ ಒಂದು ಬಣ್ಣಕೊಟ್ಟು ಮೆರುಗಿಸು ವುದಕ್ಕೆ, ಭವಾನುಭೂತಿಗಳಿಗೆ ಒಂದು ಔತ್ತ್ರವ್ಯವನ್ನು ಕಲ್ಪಿಸಿ ಗಂಭೀರ ವಾಗಿ ಮಾಡುವುದಕ್ಕೆ ಎಂದು ಭಾವಿಸಿದ್ದೆ. ಈ ಭಾವನೆಗಳಿಗೆ ಈ ಬಂಧ ಸುಷ್ಮರೂಪವನ್ನು ಕೊಡಲು ಯತ್ನಿಸಿದೆ. ಈಗ ನನಗೆ ಹಿಡಿಸುವ ಗಾನಾಂಶ ಗಳು ಬೇರೆ—ಪದ ವರ್ಣಗಳು, ಕೀರ್ತನಾರಚನೆಗಳು, ಸ್ವರಕಲ್ಪನೆಗಳು, ವಿವಿಧಲಯಗಳು. ಈ ರಾಗ ಹೆಚ್ಚು ಆ ರಾಗ ಕಡಮೆ ಎಂಬ ತಾರತಮ್ಯ ಗಳಲ್ಲೂ ನನಗೆ ವಿಶ್ವಾಸ ಕುಂದಿದೆ. ಸಂಗೀತದಲ್ಲಿ ಈಗ ನಾನು ಬಯಸುವುದು ರಸಸ್ತರದಲ್ಲಿನ ಅಲೌಕಿಕಾವರಣದಲ್ಲಿ ವಿಹರಿಸುವ ಭೋಗ, ಸನ್ಮನಸ್ಸಂಗ. ಇದರ ವರ್ಣನೆಗೆ ಈಗ ತೊಡಗುವುದು ಉಚಿತವಲ್ಲ.

"ಮೂರ್ತಿಯ ಹುಡುಗಾಟ"ದಲ್ಲಿ ವಾಸ್ತವಾಂಶ ಬಹಳ ಕಡಮೆ. ನನಗೆ ಅಲ್ಲಿ ಸ್ವಾರಸ್ಯವಾಗಿ ಕಾಣಬರುವುದು ಅಲ್ಲಿನ ಕಥಾನಾಯಕನು ಪ್ರಾಣಹತ್ಯೆ ಮಾಡಿಕೊಳ್ಳಬೇಕೆನ್ನುವಷ್ಟರ ಮಟ್ಟಿಗೆ ಕುದಿದಾಡುವುದು. ಸಂಕಟ ಬಂದಾಗ ಜೀವಬಿಡುವುದಕ್ಕೆ ಯಾರಿಗೆ ತಾನೆ ಇಷ್ಟವಿಲ್ಲ. ಸುಖ ಬಂದ ಕಾಲಕ್ಕೆ ಅದನ್ನು ಮರಳಿ ಪಡೆಯುವ ಭರವಸೆಯಿದ್ದಿದ್ದರೆ ಈ ಲೋಕ ಯಾವ ಸ್ವರ್ಗಕ್ಕೆ ಕಡಮೆ? ನನಗೆ ಒಂದೊಂದು ಸಲ ಹೊಟ್ಟೆನೋವು ಬಂದಾಗ, ಇದನ್ನು ಯಾರಾದರೂ ನನ್ನಿಂದ ಬೇರ್ಪಡಿಸಿ ಇಟ್ಟುಕೊಂಡು, ಋಜುಮಾಡಿ, ಕೇಳಿದಾಗ ಎಂದರೆ, ಒಳ್ಳೆ ರಸಪೂರಿ ಮಾವಿನ ಹಣ್ಣೋ ಹಲಸಿನ ಹಣ್ಣೋ ನೇರಿಳೆಹಣ್ಣೋ ದೊರೆತಾಗ, ಮರಳಿ ನನಗೆ ವಾಪಸು ಕೊಡಬಾರದೇ ಎಂದು ಎಷ್ಟೋ ಸಲ ಎನಿಸಿದೆ. ಜೀವವೂ ಅಷ್ಟೆ—ಕೇಳಿದಾಗ ಪಡೆಯುವಂತಾಗಬೇಕು, ಬೇಡವಾದಾಗ ಬಿಡುವಂತಾಗಬೇಕು. ಪ್ರಭುತ್ವ ಎಂದರೆ ಅದು. ಆದರೆ ಪರಮಾತ್ಮನೊಬ್ಬನೇ ಪ್ರಭು, ಬೇಕಾದಾಗ ಜೀವ ಪಡೆದುಕೊಳ್ಳಬಲ್ಲ, ಬೇಡದಾಗ ಬಿಡಬಲ್ಲ. ಈ ವಿಷಯದಲ್ಲಿ ನಾವಿನ್ನೂ ನಿರಾಶರಾಗಬೇಕಾಗಿಲ್ಲ. ಮನುಷ್ಯನ ಸಾಹಸಕ್ಕೂ ಸಿದ್ಧಿಗೂ ಮಿತಿಯಿಲ್ಲ ವೆನ್ನಿಸುವ ಕಾಲದಲ್ಲಿ ಈಗ ನಾವಿದ್ದೇವೆ. ಮಿಡಿತೆಗಳಂತೆ ಜೀವಕ್ಕೇ ಏರೋಪ್ಲೇನನ್ನು ತಗುಲಿಸಿಕೊಂಡು ಬಾಳದೆ, ವಿಮಾನವನ್ನು ಹೊಕ್ಕಾಗ

ಮಿಡಿತೆಯಾಗಿ, ಹೊರಕ್ಕೆ ಬಂದು ಮನುಷ್ಯನಾಗಿ ಮೆರೆಯುವ ಸ್ವಾತಂತ್ರ್ಯ ವನ್ನು ಆತ ಪಡೆದಿಲ್ಲವೆ? ಜೀವದ ವಿಷಯದಲ್ಲೂ ಈ ಸ್ವಾತಂತ್ರ್ಯವನ್ನು ಪಡೆದರೂ ಪಡೆದನೇ. ಆ ಕಾಲದವರೆಗೂ ಆತ್ಮಹತ್ಯೆ ಭಯಂಕರ. ಸ್ವಸ್ಥ ರಾಗಿರುವ ನಮಗೆ "ನಾಣಿ"ಯ ಆತ್ಮಾಹತ್ಯಾಪ್ರಯತ್ನ ಈಗೊಂದು ನಗೆಯ ಎಳೆಯನ್ನು ತಂದೀತು. ಈ ಬಂಧ ಸ್ವಲ್ಪ ಕಲಾಚಾತುರ್ಯವನ್ನೂ ತೋರು ವಂತಿದೆ.

ಇನ್ನುಳಿದ ಮೂರು ಚಿತ್ರಣಗಳು ಬೇರೆ ಬಣ್ಣದವು. ಇವುಗಳಲ್ಲಿ ಚಿಂದ ಳಿರು ಹಸುರು ತಿರುಗುವಂತೆ ಕಾಣುತ್ತದೆ. ಹರೆಯ ಬಲಿತು ಮನಸ್ಸು ಸ್ವಲ್ಪ ಪ್ರೌಢವಾದಾಗ ಇವು ಮೂಡಿಬಂದಿರಬೇಕು. "ವೆಂಕೋಬರಾಯರು ಪದ್ಯ ಓದಿ ವಿಮರ್ಶಿಸಿದ್ದು" ಎಂಬುದರಲ್ಲಿ ಬರುವ ಪದ್ಯ ನನ್ನದಾದುದರಿಂದ, "ವೆಂಕೋಬರಾಯ"ರಲ್ಲಿ ನನ್ನ ತೀರ್ಥರೂಪರ ಪ್ರತಿಬಿಂಬವಿದೆ ಎಂದು ಯಾರಾದರೂ ಊಹಿಸಿದರೆ ಅದು ತೀರ ತಪ್ಪಾದೀತು. ನನ್ನ ತೀರ್ಥರೂಪರು ಯಾವ ವಿಧದಲ್ಲೂ ಲೌಕಿಕರಲ್ಲ. ಅವರಿಗೆ ಇಂಗ್ಲಿಷಿನ ಗಂಧವೇ ಇರಲಿಲ್ಲ. ಆ ಶೈಶವ ಸರಳತೆ ಮತ್ತು ವಿದ್ವತ್‌ಗಾಂಭೀರ್ಯ, ದೈವನಮ್ರತೆಯ ಜತೆಗೆ ವಿಷಯಕೌತುಕ, ಎಲ್ಲರೊಂದಿಗೆ ಬೆರೆಯುವ ಸಹಜವಿನಯದ ಜತೆಗೆ ಗೌರವಕ್ಕೆ ಕುಂದುಬರುವಂತೆ ತೋರಿದಾಗ ಆ ಪ್ರತ್ಯೇಕತೆಯ ಸೆಡವು— ಆ ತಲೆಮಾರಿನ ಸಂಸ್ಕೃತಿಸಂಪನ್ನರ ರೀತಿಯೇ ಬೇರೆ, ನಡೆವಳಿಕೆಯೇ ಬೇರೆ. ಅಂಥವರು ಈಗ ವಿರಳ. "ವೆಂಕೋಬರಾಯ"ರಷ್ಟು ಸಂಸ್ಕೃತಿಯುಳ್ಳ ವರೂ ಯಾವಾಗಲೂ ವಿರಳರೇ; ಆದರೆ ಈ ಕಾಲದಲ್ಲಿ ದುರ್ಲಭರಲ್ಲ— "ವನಮಾಲಿ"ಗೆ ಅವರಲ್ಲಿದ್ದಷ್ಟು ಸಲಿಗೆ ನನಗೆ ನನ್ನ ತೀರ್ಥರೂಪರಲ್ಲಿ ಎಂದೂ ಇರಲಿಲ್ಲ. ನನ್ನ ಕವನಗಳನ್ನು ಅವರ ಗಮನಕ್ಕೆ ತರುವ ಕುತೂಹಲವೂ ಧಾರ್ಷ್ಟ್ಯವೂ ನನ್ನ ಕನಸಿನಲ್ಲಿಯೂ ಸುಳಿಯದು. ಪೂಜ್ಯ ಮಾಸ್ತಿಯವರು ಒಮ್ಮೆ ನಮ್ಮೂರಿಗೆ ಬಂದಿದ್ದಾಗ ನಮ್ಮ ತಂದೆಯವರೊಡನೆ ನನ್ನನ್ನು ಪ್ರಶಂಸಿಸಿ, "ಇದೋ ಈ ಕವನವನ್ನು ನೋಡಿ ಎಷ್ಟು ಮುದ್ದಾಗಿದೆ," ಎಂದು "ಯದುಗಿರಿಯ ಮೌನವಿಕಾಸ"ವನ್ನು ಓದಿದರು. ಕೊನೆ ಕೊನೆಗೆ ನಾನಲ್ಲಿಗೆ

ಹೋದೆ. ನನ್ನ ತೀರ್ಥರೂಪರು ಹಿರಿಯರಿಂದ ನನ್ನ ಪ್ರಶಂಸೆಯನ್ನು ಕೇಳಿ ಸಂತೋಷಪಟ್ಟರೆಂಬುದಷ್ಟು ನನಗೆ ಮನದಟ್ಟಾಯಿತು. ಕವನದ ವಿಚಾರ ದಲ್ಲಿ ಅವರ ಮನಸ್ಸು ಹೇಗಿದ್ದಿತೋ ಅದು ಇನ್ನೂ ರಹಸ್ಯವಾಗಿಯೇ ಉಳಿ ದಿದೆ. ಈ ಪ್ರಬಂಧದಲ್ಲಿ ನನ್ನ ಕವನಗಳನ್ನು ಪ್ರೌಢರಾದ ಸಂಸ್ಕೃತಿ ಸಂಪ ನ್ನರು ಹೇಗೆ ಓದಿ ನೋಡಿದರೆ ರುಚಿ ಕಂಡೀತು ಎಂಬುದರ ವರ್ಣನೆ ಇದೆ. ಮನಸ್ಸು ಧ್ಯಾನಸ್ಥಲದಲ್ಲಿರಬೇಕು, ಚಿತ್ತದ ದ್ರಾವಣದಲ್ಲಿ ಸಾಲುಸಾಲು ಗಳನ್ನು ಕರಗಿಸಿ ರುಚಿ ನೋಡಿ ಆಸ್ವಾದಿಸುವ ವ್ಯವಧಾನವಿರಬೇಕು–ಇತ್ಯಾದಿ ಇತ್ಯಾದಿ ಆಕಾಂಕ್ಷೆಗಳು. ಈ ವೇಗ ಆವೇಗಗಳ ಯುಗದಲ್ಲಿ ಇದಕ್ಕೆಲ್ಲ ಅವಕಾಶವೆಲ್ಲಿ? ಒಂದು ಪದ್ಯ ತನ್ನಲ್ಲಿರುವ ಹುರುಳನ್ನು ಹೊರಗೆಡುವುದಕ್ಕೆ ಕನಿಷ್ಠ ನಾಲ್ಕು ಓದನ್ನಾದರೂ ಅಪೇಕ್ಷಿಸುತ್ತದೆಯಂತೆ. "ಬಾಳಿನ ಹಂಬಲಿ" ನಂಥ ಸರಳ ಪದ್ಯದ ಸಾಲುಗಳೂ ಭಾವಕರ ಮನಸ್ಸಿನಲ್ಲಿ ಎಷ್ಟು ವಿಸ್ತಾರ ವಾಗಿ ಹರಡಿಕೊಳ್ಳಬಲ್ಲುವು ಎಂಬ ವಿವರಣೆಯಲ್ಲಿದೆ ಈ ಲೇಖನದ ಸಾರ್ಥಕ್ಯ. ಬಿಡಾಲರಾಯರ ಸಂಗೀತದ ವರ್ಣನೆಯನ್ನು ಬಿಡಬಹು ದಾಗಿತ್ತೋ ಏನೋ. ಏಕೆಂದರೆ ಇಲ್ಲಿನ ಹಾಸ್ಯರಸ ಒಟ್ಟಿನ ಪ್ರಬಂಧದ ಸ್ಥಾಯಿ ರಸಕ್ಕೆ ಅಷ್ಟು ಪೋಷಕವಾಗಿಲ್ಲ ಎಂಬುದು ನಿಜ, ಸಾರಿಗೆ ಸ್ವಲ್ಪ ಉಪ್ಪು ಹೆಚ್ಚು ಎನ್ನುವ ಹಾಗೆ. ಮಿಕ್ಕ ಭಕ್ಷ್ಯಗಳಿಂದ ಇದರ ಕ್ಷಾರವನ್ನು ಕಡಮೆ ಮಾಡಿಕೊಳ್ಳುವುದೊಂದೇ ಈಗಿರುವ ಉಪಾಯ.

ಹಿಂದೆ ಹೇಳಿದಂತೆ "ಹ ಹ್ಹಾ ಒಂದು ನಕ್ಷತ್ರ" ಎಂಬ ಭಾವನಾ ಲಹರಿ ಪ್ರಬಂಧದ ಛಾಯೆಯನ್ನು ತಳೆದಿದೆ. ಮಿತ್ರರು ಇದನ್ನೆತ್ತಿ ಹೊಗಳಿ ದಾಗ ನನ್ನ ಮನಸ್ಸೂ ಹ್ಞೂ ಗುಟ್ಟಿ ಅವರ ಅಭಿಜ್ಞತೆಗೆ ಹರ್ಷ ಗೊಂಡಿತು. ನನ್ನ "ರಸ"ಜಿಜ್ಞಾಸೆಯ ಮೂಲ ಈ ಬಂಧದಲ್ಲಿ ಅಡಗಿ ದೆಯೋ ಏನೋ. ಮನಸ್ಸು ರಸಸ್ತರಕೇರಿದಾಗ ಸೂರಿನ ತೂತೂ ಒಂದು ನಕ್ಷತ್ರವೇ. ಮನೆಗತ್ತಲೇ ಕಾಳರಾತ್ರಿ, ಒಡೆದ ಮಡಕೆ ಹರುಕಲು ಚಾಪೆ ಗಳೇ ಪ್ರಳಯಜಲನಿಮಗ್ನ ಸೃಷ್ಟಿಚಯ. ಆ ವಿಸ್ಮಯಕರವಾದ ಏರುವೆ ಯಲ್ಲಿ ಹೆಚ್ಚು ಕಾಲ ಇರುವುದು ನಮ್ಮಿಂದಾಗದು–ಎಲ್ಲೋ ಒಂದು ನಿಮಿಷ,

ಎರಡು ನಿಮಿಷ. ದೀರ್ಘಕಾಲ ನಿಲ್ಲುವುದಕ್ಕೆ ಬೇರೆ ಕರಣೋಪಕರಣಗಳು ಬೇಕು. ಆದರೆ ಆ ಒಂದು ಕ್ಷಣ ಕಾಲದಲ್ಲಿ ಎಂಥ ಭೋಗ ನಮಗಾಗಿ ಕಾದಿದೆ! ಅಲ್ಲಿಂದ ಮರಳಿ ಭವಕ್ಕಿಳಿದಾಗ "ನಕ್ಷತ್ರ"ವೂ ನಮ್ಮಂತೆ ತನ್ನ ಸ್ವಸ್ಥಿತಿಗೆ ಮರಳುತ್ತದೆ. ಈಗ ಅದೊಂದು ಸೂರಿನ ತೂತು. ಹುಚ್ಚು ಮನಸ್ಸಿನ ಬೀಸೊಂದನ್ನು ಸಹೃದಯರಿಲ್ಲಿ ಕಂಡಾರು.

ಇನ್ನುಳಿದಿರುವುದು "ಶಿವನ ಕಣಸು". ನಂ. ಶಿ. ಅವರು ನಾನು ಬೆಂಗಳೂರಿನಿಂದ ಮೈಸೂರಿಗೆ ರೈಲಿನಲ್ಲಿ ಪ್ರಯಾಣ ಮಾಡಿ ಅವರ ಮನೆಗೊಂದು ಬಾರಿ ಬಂದಿದ್ದಾಗ ನನಗಾದ ಅನುಭವವನ್ನು ವರ್ಣಿಸಿ ಹೇಳಿದೆನೆಂದೂ ಆಮೇಲೆ ಬರವಣಿಗೆಗೆ ಇಳಿಸಿದೆನೆಂದೂ ಈಗ ಜ್ಞಾಪಿಸಿದರು. ಮನುಷ್ಯನಿಗೆ ಮನಸ್ಸು ಯಾವಾಗ ತಿಳಿವೆಯಲ್ಲಿರುತ್ತದೋ ಯಾವಾಗ "ರಸ"ಕರಣವನ್ನು ಪಡೆದಿರುತ್ತದೋ ಹೇಳಲು ಬಾರದು. "ಶಿವು" ಮತ್ತು "ನಾಣಿ" ಈ ಪಾತ್ರಗಳು ನನ್ನ ಆಶೋತ್ತರಗಳ ಎರಡು ಮುಖಗಳನ್ನು ಪ್ರತೀಕಿಸುತ್ತವೆ. "ಶಿವ" ನನಗಿಂತ ತೀರ ವಿಭಿನ್ನ ವ್ಯಕ್ತಿಯೆಂದೇ ಕಾಣುತ್ತಾನೆ. ಆತನಲ್ಲಿ ನನ್ನ ಮಿತ್ರರ ಶ್ರೇಷ್ಠ ಗುಣಗಳೂ ಸಮ್ಮಿಳಿತವಾಗಿರುವಂತಿದೆ. ಈ ಪ್ರಬಂಧದಲ್ಲಿ ನಾನು ವರ್ಣಿಸಿರುವ ಮನೋಭಾವವನ್ನು, ಆ ಆತ್ಮದರ್ಶನ ವೈಶದ್ಯವನ್ನು ನಾನು ಮತ್ತೊಂದು ಸಂದರ್ಭದಲ್ಲಿ ಪಡೆದೆ. ಅದರ ವರ್ಣನೆ "ಅಂತರ್ಯಾಮಿಯ ಒಂದು ಸೋಗಿನ ದರ್ಶನ" ಎಂಬ ಪದ್ಯದಲ್ಲಿ ಮೂಡಿಬಂದಿದೆ. ದೇಹಪ್ರಕೃತಿ ಹೇಗಿದ್ದರೆ, ಯಾವ ಶ್ರುತಿಗೆ ಸಂಬದ್ಧವಾಗಿದ್ದರೆ ಇಂಥ ಬೆರಗಿನ ಕಣಸುಗಳು ಮೂಡಿ ಬರುತ್ತವೋ ಕಾಣೆ. ಆ ನಿಲವಿನಲ್ಲಿ ಸಮಸ್ತವೂ ಸುಂದರ, ಪ್ರೇಮಮಯ.

ಈ ಪ್ರಬಂಧ ಸಹೃದಯರ ಮನಸ್ಸಿಗೆ ಬಂದದ್ದರಿಂದ ಉತ್ತೇಜನಗೊಂಡು, "ಶಿವ"ನ ವ್ಯಕ್ತಿತ್ವವನ್ನೇ ಅವಲಂಬಿಸಿ ಇನ್ನೂ ಕೆಲವು ಬರಹಗಳನ್ನು ಬರೆಯಬೇಕೆಂದು ಬಯಸಿ ಎರಡು ಮೂರು ಲೇಖನಗಳನ್ನು ಬರೆದೆ. ಅವು "ಜೀವನ"ದಲ್ಲಿ ಅಚ್ಚಾದುವು. ಅಂಥ ಲೇಖನಗಳಲ್ಲಿ ಹೆಸರಿಸಬಹುದಾದುದು "ಕಪ್ಪೆ" ಎಂಬ ಪ್ರಬಂಧ. ಕುತೂಹಲವುಳ್ಳವರು

"ಜೀವನ"ದ ಹಿಂದಿನ ಸಂಪುಟಗಳನ್ನು ತಿರುವಿಹಾಕಿ ಅದನ್ನು ನೋಡಬಹುದು. ಈ ತರದ ಬರಹಗಳು ಏಕೋ ಮುಂದುವರಿಯಲಿಲ್ಲ. "ಈಚಲು ಮರ" ಅಡ್ಡ ಬಂದಿತೋ ಏನೋ.

ಈ ಭಾವನಾ ಚಿತ್ರಗಳ ಲಹರಿ ಈ ರೀತಿ ಹಬ್ಬಿದೆ. ಇನ್ನಿಂಥವುಗಳನ್ನು ಬರೆಯಲಾರೆನೆಂದೇ ನನ್ನೆಣಿಕೆ. ಈ ವಿರಕ್ತಿ ಸಹಜ. ಏಕೆಂದರೆ, ಪ್ರಕೃತಿಯಲ್ಲೂ ದಿನದಿನವೂ ಈ ವಿರಕ್ತಿ ವ್ಯಾಪಾರವೇ ಕಂಡುಬರುತ್ತಿದೆಯಲ್ಲವೆ. ಹೇಗೆಂದರೆ:

ಕೆಂದಳಿರೆಳಮೆಗೆ ಬಲಿವೆಲೆ ವಿರಕ್ತ
ಅಂದದ ಹೂದಳದೊಳು ಮಿಡಿಯುಂ
ಮುಂದದು ಕಳಿಯಲು ಮರದೊಳೆ ವಿರಕ್ತ . . .

ಹೀಗಿದೆ ಪ್ರಕೃತಿಯ ಸರಿಕೆ. ಎಳತನವನ್ನು ನುಂಗದೆ ತಾರುಣ್ಯ ಬಲಿಯದು. ಆದರೆ ಈ ಮುಗ್ಧ ಲೇಖನಗಳಿಂದ ನಾನು ಅನೇಕ ಮಂದಿ ವಿದಗ್ಧರ ಮೆಚ್ಚುಗೆಗೆ ಪಾತ್ರನಾದೆ. ಧಾರವಾಡದ ಗೆಳೆಯರ ಗುಂಪಿನವರು ಈ ಭಾವನಾಚಿತ್ರಗಳನ್ನು ಓದಿ ನನ್ನನ್ನು ತಮ್ಮ ಬಳಗದವರಂತೆ ಭಾವಿಸಿ ಮೈತ್ರಿಯನ್ನು ತೋರಿದರು. ಈಗಲೂ ನಾನು ಆ ಕಡೆ ಭಾವನಾಚಿತ್ರಕಾರನಾಗಿಯೇ ಉಳಿದಿದೇನೆ ಎಂದೆನಿಸುತ್ತದೆ. ಇತ್ತೀಚೆಗೆ ಅಪರಿಚಿತ ಸಭೆಗಳಿಗೆ ನನ್ನನ್ನು ಪರಿಚಯ ಮಾಡಿಕೊಡುವಾಗ ಅಲ್ಲಲ್ಲಿನ ಹಳೆಯ ಗೆಳೆಯರು ಈ ಪುಸ್ತಕವನ್ನು ಹೆಸರಿಸಿ ಪ್ರಶಂಸಿಸಿ ನನಗೆ ಹರ್ಷವನ್ನೂ ಅಚ್ಚರಿಯನ್ನೂ ತಂದಿದ್ದಾರೆ. ಈಗ ಇವನ್ನು ಪುನಃ ಓದಿದರೆ ಇವುಗಳ ಆಕರ್ಷಣ ಸಾಮರ್ಥ್ಯ ಇವುಗಳ ಸರಳತೆಯಲ್ಲಿದೆ ಎಂದು ತೋರುತ್ತದೆ. ಸಂಸ್ಕೃತ ಶಬ್ದಗಳನ್ನು ಇಲ್ಲಿ ಹುಡುಕಿ ಎತ್ತಬೇಕು. ತಿಳಿಗನ್ನಡಕ್ಕೆ ಹೃದಯದಿಂದ ನೇರವಾಗಿ ಹೊರಟು ಮತ್ತೊಬ್ಬ ಕನ್ನಡಿಗನ ಎದೆಯನ್ನು ಮುಟ್ಟುವ ಹರಿತವುಂಟು. "ಕಲೆಯ ಕಲಿವಿಗೆ ನಿಡುಗಾಲಬೇಕು. ಆದರೆ ಆಯುಸ್ಸೋ ಅಲ್ಪ." ಈಚೆಗೆ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಪಠ್ಯಕ್ರಮಗಳ ಸಮಿತಿಯವರೂ ಈ ಪುಸ್ತಕವನ್ನು ಪ್ರೀ-ಯೂನಿವರ್ಸಿಟಿ ಕೋರ್ಸ್ ವಿದ್ಯಾರ್ಥಿಗಳಿಗೆ

ಪಠ್ಯಪುಸ್ತಕವನ್ನಾಗಿ ಆರಿಸಿ ನನಗೆ ವಿಶೇಷವಾದ ಉಪಕಾರ ಮಾಡಿದ್ದಾರೆ. ಅವರಿಗೂ, ಸಹೃದಯವೃಂದಕ್ಕೂ ನಾನು ಚಿರಋಣಿ. ಕಾಲಕ್ಕೆ ಸರಿಯಾಗಿ ವಿಶೇಷ ಶ್ರಮವಹಿಸಿ ಇದನ್ನು ಮುದ್ರಿಸಿಕೊಟ್ಟಿರುವ ಶ್ರೀ ಜಿ. ಎಚ್. ರಾಮರಾಯರಿಗೆ ನನ್ನ ಆದರದ ಕೃತಜ್ಞತೆಗಳು ಸಲ್ಲಬೇಕು. ಇದರ ಓದಿನಿಂದ ವಿದ್ಯಾರ್ಥಿಗಳಿಗೆ ತಮ್ಮ ತಾಯ್ನುಡಿಯ ವಿಷಯದಲ್ಲಿ ಪ್ರೀತಿವಿಶ್ವಾಸಗಳು ಬೆಳೆಯಲೆಂದು ಹಾರೈಸುತ್ತೇನೆ.

ಬೆಂಗಳೂರು
೧೭–೬–೧೯೬೧

ಪು. ತಿ. ನರಸಿಂಹಾಚಾರ್

# ರಾಮಾಚಾರಿಯ ನೆನಪು

ನನ್ನ ಎಳತನದ ಗೆಳೆಯರೊಳಗೆ ರಾಮಾಚಾರಿಯ ಮುಖ ನೆನಪಿನಲ್ಲಿ ಸ್ಫುಟವಾಗಿ ನೆಲೆಸಿದೆ. ನನ್ನ ಸುಖತಮವಾದ ಕನಸುಗಳಲ್ಲಿ ಆತನ ಮುಗ್ಧ ವದನ ಸುಳಿಯುತ್ತದೆ. ನಮ್ಮ ಬಾಲಕೇಳಿಯನ್ನು ಆತ ತನ್ನ ಪ್ರೌಗಲ್ಭ್ಯದಿಂದ ಎಷ್ಟು ಮಧುರವಾಗಿ ಮಾಡುತ್ತಿದ್ದನು; ಶಾಲೆಯ ತರಗತಿಗಳಲ್ಲಿ ನಾವು ಅವನಿಗೆ ಎಸಗುತ್ತಿದ್ದ ಕುಚೇಷ್ಟೆಗಳನ್ನು ಎಷ್ಟು ಸಹನೆಯಿಂದ ಸಹಿಸುತ್ತಿದ್ದನು; ಗರಿಕೆ ಹುಲ್ಲಿನಿಂದ ಹಸುರಾದ ಮೃದುವಾದ ಮೈದಾನದ ಮೇಲೆ ವೇಗದಿಂದ ಉರುಳುತ್ತಿದ್ದ, ಎಲ್ಲರೂ ಕೈಬಿಟ್ಟ, ರಬ್ಬರ್ ಚೆಂಡುಗಳನ್ನು ಜಿಂಕೆಯಂತೆ ಓಡಿ ಹೇಗೆ ಹಿಡಿಯುತ್ತಿದ್ದನು! ಪ್ರಿಯ ಸಖ, ರಾಮಾಚಾರಿ, ನಿನ್ನನ್ನು ಅರಿತವರಾರಿಗೆ ನಿನ್ನನ್ನು ಮರೆಯಲಾಗುವುದು?

ರಾಮಾಚಾರಿ ತನ್ನ ಜೀವಿತದ ಕೊನೆಯವರೆಗೆ ಎಳತನದೊಳಗೇ ಇದ್ದುಬಿಟ್ಟನು. ಶರೀರದಾರ್ಢ್ಯದಲ್ಲಿಯೂ, ಎತ್ತರದಲ್ಲೂ, ಸ್ವಭಾವದಲ್ಲೂ ಸಹ ಕೇವಲ ಹುಡುಗ. ಏಳು ವರುಷಗಳು ತುಂಬುವವರೆಗೆ, ಆ ವಯಸ್ಸಿಗೆ ಹೊಂದಿಕೆಯಾಗುವಷ್ಟು ಅವನ ದೇಹವು ಬಲಿತು ಬೆಳೆಯಿತು; ಆದರೆ ಬೆಳವಣಿಗೆ ಅಷ್ಟಕ್ಕೇ ನಿಂತುಹೋಯಿತು. ಮತ್ತೊಂದು ಏಳು ವರುಷಗಳು ಅವನ ಮೈಮೇಲೆ ಸಾಗಿದ್ದರೂ ಅವು ತಮ್ಮ ಆಗಮನದ ಯಾವ ಕುರುಹನ್ನೂ ಅಲ್ಲಿ ಬಿಟ್ಟಿರಲಿಲ್ಲ; ಮತ್ತು ಅವನ ಸ್ವಭಾವದಲ್ಲಿ ಯಾವ ಬಗೆಯ ವ್ಯತ್ಯಾಸವನ್ನೂ ತಂದಿರಲಿಲ್ಲ. ಒಂದಂಶದಲ್ಲಿ ವಿನಾ ರಾಮು ಈಗ ಬುಗುರಿ ಚಾವಟಿಗಳನ್ನು ಮೂಲೆಗೆಸೆದು, ಚೆಂಡು ದಾಂಡುಗಳನ್ನು ಹಿಡಿದುಕೊಂಡು ಬೀದಿಬೀದಿಗಳಲ್ಲಿ ತಿರುಗುತ್ತಿದ್ದನು, ಅಷ್ಟೆ. ಹುಡುಗರೊಳಗೆ ಅವನು ಜಿಂಕೆ; ಜಿಂಕೆಯಂತೆ ಓಟ, ಜಿಂಕೆಯಂತೆ ಅಗಲವಾದ ಸ್ನಿಗ್ಧವಾದ ಕಣ್ಣುಗಳು ರಾಮಾಚಾರಿಗೆ. ಅವನನ್ನು ಕಂಡರೆ ನಮಗೆಲ್ಲರಿಗೂ ಬಹಳ ಪ್ರೀತಿ. ನನಗಂತೂ ಹೇಳಿ ತೀರದು. ಸ್ನೇಹಪೂರ್ಣವಾದ, ಮೃದುವಾದ ಅವನ ಬೆದರುಗಣ್ಣಿನ ನೋಟವನ್ನು ಹೇಗೆತಾನೆ ಮರೆಯಲಿ?

ರಾಮಾಚಾರಿ ಹುಟ್ಟುವುದಕ್ಕೆ ಮುಂಚೆಯೇ ಪಿತೃವಿಹೀನನು ಮತ್ತು ಆಗರ್ಭ ದರಿದ್ರನು. ಆದರೆ ತನ್ನ ಬಡತನದ ಅರಿವೇ ಅವನಿಗಿರಲಿಲ್ಲ; ಮಕ್ಕಳಿಗಿರುವುದಿಲ್ಲ. ಅವರ ಎಣಿಕೆಯಲ್ಲಿ ಯಾರ ಹತ್ತಿರ ತಿಂಡಿ ಇರುವುದಿಲ್ಲವೋ ಅವರೇ ನಿರ್ಭಾಗ್ಯರು; ಯಾರ ಜೇಬುಗಳು ತಿಂಡಿಯಿಂದ ತುಂಬಿವೆಯೋ ಅವರೇ ಪುಣ್ಯವಂತರು. ನಮ್ಮ ದೃಷ್ಟಿಯೊಳಗೆ ರಾಮಾಚಾರಿ ಕುಬೇರನು. ಅವನ ಜೇಬು ಅವಲಕ್ಕಿ, ಹುರಿಗಡಲೆ, ನೆಲಗಡಲೆ, ಕೊಬ್ಬರಿ, ಬೆಲ್ಲ, ಇವುಗಳಿಂದ ಯಾವಾಗಲೂ ಕಿಕ್ಕಿರಿದಿರುತ್ತಿತ್ತು. ಅವನ ತಾಯಿ ಆತನನ್ನಷ್ಟು ಪ್ರೇಮದಿಂದ ನೋಡುತ್ತಿದ್ದಳು. ರಾಮುವೋ ಕರ್ಣನಂತೆ — ತನ್ನ ನಾಶವನ್ನು ತಾನೇ ಕಾಣದಷ್ಟರಮಟ್ಟಿಗೆ — ಉದಾರಿ. ಇಂಥವನು ಕುಬೇರನಲ್ಲದೆ ಮತ್ತೇನು? ಅವನ ಗೇಣುದ್ದದ ಬಾಳಿನಲ್ಲಿ ಅವನಿಗಿದ್ದುದು ಒಂದೇ ಸುಖವೆಂದು ಹೇಳಬಹುದು. ಏನೆಂದರೆ, ತಿಂಡಿಗಳಿಂದ ಕೊಬ್ಬಿರುವ ತನ್ನ ಜೇಬಿನ ಡುಬ್ಬನ್ನು ತನ್ನ ಕೆಳೆಯರಿಗೆ ತೋರಿಸಿ, ಅವರ ಬಾಯಲ್ಲಿ ನೀರಿಳಿಸಿ, "ನನ್ನನ್ನು ನೀವು ಈ ದಿನದ ಆಟಕ್ಕೆ ಹೆಗ್ಗಡೆಯನ್ನಾಗಿ ಚುನಾಯಿಸದಿದ್ದರೆ ನಿಮ್ಮ ಪಾಲಿಗೆ ಇದೊ, ಸೊನ್ನೆ, ನೋಡಿರಿ" ಎಂದು ಗರ್ಜಿಸಿ ವ್ಯಾಜ ಕೋಪದಿಂದ ನಮ್ಮೆಲ್ಲರನ್ನೂ ನುಂಗುವಂತೆ ದಿಟ್ಟಿಸಿ, ಆ ನೋಟವನ್ನು ಮೆಲ್ಲನೆ ನೆಲಕ್ಕಿಳಿಸುವುದು. ಅಗತ್ಯವಾಗಿ, ಚಾಚು ಎನ್ನದೆ, ಅವನನ್ನು ನಾವು ಹೆಗ್ಗಡೆತನಕ್ಕೆ ಚುನಾಯಿಸುತ್ತಿದ್ದೆವು. ಸ್ವಲ್ಪಕಾಲ ಅವನು ಹೇಳಿದಂತೆ ಕೇಳುವಹಾಗೆ ನಟಿಸುತ್ತಲೂ ಇದ್ದೆವು. ಆದರೆ ಅವನ ಜೇಬು ಬರಿದಾಗಿ ನಮ್ಮ ಬಾಯ ಚಪ್ಪರತವು ನಿಂತಕೂಡಲೆ, ಅವನ ಗೊಣಗುಟ್ಟುವಿಕೆಗೆ ಸ್ವಲ್ಪವೂ ಲಕ್ಷ್ಯಕೊಡದೆ ನಿರ್ದಾಕ್ಷಿಣ್ಯದಿಂದ ಪದಚ್ಯುತನನ್ನಾಗಿ ಮಾಡಿಬಿಡುತ್ತಿದ್ದೆವು. ಎಂದಿನಂತೆ ಅವನಿಗೆ 'ಹಿತ್ತಲಕಾಯಿ' ಪದವಿ ಕಾದಿರುತ್ತಿತ್ತು. ಅಯ್ಯೋ ಪಾಪ, ಒಂದು ದಿನವಾದರೂ ರಾಮು ಎರಡು ಗಳಿಗೆಗಳ ಮೇಲೆ ನಮ್ಮ ನಾಯಕನಾಗಿ ಇರುತ್ತಿರಲಿಲ್ಲ. "ಹೊರಗೆ ತೆಗೆದುಕೊಂಡುಹೋಗಿ, ನೀನೂ ತಿನ್ನದೆ, ಎಲ್ಲರಿಗೂ ಹಂಚುತ್ತೀಯಾ" ಎಂದು ಕೋಪಿಸುವ ತಾಯಿಯ ಪ್ರಹಾರಗಳನ್ನೂ ಲೆಕ್ಕಿಸದೆ, ಕಷ್ಟದಿಂದ ಆರ್ಜಿಸಿದ ತನ್ನೈಶ್ವರ್ಯವನ್ನೆಲ್ಲಾ ಹೆಗ್ಗಡೆತನದ ಸಂಪಾದನೆಗಾಗಿ ನಮಗೆ ಸೂರೆ ಕೊಡುತ್ತಿದ್ದರೂ ನಾವು ಎರಡು ಗಳಿಗೆಗಳ ಮೇಲೆ ಅವನ ಆಸೆ ಸಲ್ಲಿಸುತ್ತಿರಲಿಲ್ಲ ಮತ್ತು ಆ ಕರ್ಣತ್ಯಾಗಕ್ಕೆ ಮರುಗುತ್ತಲೂ ಇರಲಿಲ್ಲ.

ಅವನ ಸಂಬಂಧವಾದ ಅಲ್ಪವಿಷಯಗಳೂ ಕೂಡ ಈಗಲೂ ನನ್ನ ನೆನಪಿನಲ್ಲಿ ಮಾಸದೆ ಇವೆ ಮತ್ತು ನನ್ನ ಬೇಸರದ ಬಾಳಿನ ಅನೇಕ ಗಳಿಗೆಗಳನ್ನು ಅವು ಆನಂದದಿಂದ ಸಜೀವವಾಗಿ ಮಾಡುತ್ತವೆ. ಎಳತನದ ನಲವಿನ ನೆನಪುಗಳನ್ನು ಎಲ್ಲಿಯವರೆಗೆ ನನ್ನ ಹೃದಯವು ಧರಿಸಬಲ್ಲುದೋ ಅಲ್ಲಿಯವರಿಗೂ ರಾಮಾಚಾರಿಯನ್ನು ಮರೆಯಲಾಗುವುದೆ?

ರಾಮುವಿಗೆ ಹದಿನಾರು ವರುಷಗಳು ತುಂಬಿದ ಮೇಲೆ ತನ್ನ ಬಡತನದ ಅರಿವು ಅವನಿಗೆ ಸ್ವಲ್ಪ ಹುಟ್ಟಿತು. ಈ ಜ್ಞಾನವು ಅವನ ನಗೆ ತುಂಬಿದ ಬಾಳಿನಲ್ಲಿ ಛಾಯೆಗಳನ್ನು ಆಗಾಗ ಎಸೆಯುತ್ತಿದ್ದಿತು; ಅವನ ಉಲ್ಲಾಸವನ್ನು ಕುಗ್ಗಿಸುತ್ತಿತ್ತು. ಲೋಕ ಅವನನ್ನು ಚಿರಂತನ ಬಾಲ್ಯದಲ್ಲಿ ಇರಗೊಡದಿರಲು ಹೆಣಗಾಡುತ್ತಿತ್ತು. ಅವನ ತಾಯಿ ಹಣವನ್ನೋ ಧಾನ್ಯವನ್ನೋ ತರುವ ಕೆಲಸಗಳನ್ನು ಅವನಿಗೆ ನೇಮಿಸುತ್ತಿದ್ದಳು. ಸುಗ್ಗಿಯ ಕಾಲದಲ್ಲಿ ಹಳ್ಳಿಹಳ್ಳಿಗೆ ಆತನು ತಿರುಗಬೇಕಾಗಿದ್ದಿತು. ಆಗ, ಜಗತ್ತು ನೆಮ್ಮದಿಯ ಬೆಳಕಿನಲ್ಲಿ ನಲಿಯುತ್ತಿದ್ದಾಗ, ಹೆಗಲಿನ ಮೇಲೆ ಚೀಲವನ್ನು ಹಾಕಿಕೊಂಡು ದವಸವನ್ನು ಯಾಚಿಸುತ್ತಾ, ವಿಷಣ್ಣನಾಗಿ ರಾಮು ಕಣದಿಂದ ಕಣಕ್ಕೆ ಅಲೆಯುತ್ತಿದ್ದನು. ಆಗ ನಮ್ಮೂರಿನ ಆಟದ ಬಯಲು ಬಿಮ್ಮೆನ್ನುತ್ತಿದ್ದಿತು, ನಮ್ಮ ಆಟಗಳೆಲ್ಲಾ ಉತ್ಸಾಹರಹಿತವಾಗಿ ಇರುತ್ತಿದ್ದುವು, ಮತ್ತು ಅವನನ್ನು ಅಗಲಿರುವ ನಮ್ಮ ಮನದ ಹಳಹಳಿಕೆಗಿಂತ ನಮ್ಮನ್ನು ಅಗಲಿರುವ ಅವನ ಮನದ ಹಳಹಳಿಕೆ ನೂರು ಪಾಲು ಹೆಚ್ಚು ಎಂಬ ಯಾವುದೋ ಒಂದು ಭಾವ ನಮ್ಮ ಅಂತಃಕರಣಗಳಲ್ಲಿ ನುಡಿಯುತ್ತಿದ್ದಿತು. ರಾಮು ತನ್ನ ತಾಯಿಗೆ ನೆರವಾಗಬೇಕೆಂದೂ, ತನ್ನ ಬಡತನವು ಇದರಿಂದ ಸ್ವಲ್ಪಮಟ್ಟಿಗೆ ನೀಗುವುದೆಂದೂ, ಈ ಕೆಲಸಗಳನ್ನು ಕೈಗೊಂಡವನಲ್ಲ. ಇಷ್ಟೇ ಅದರ ಗುಟ್ಟು: ರಾಮುವಿಗೆ ತನ್ನ ತಾಯನ್ನು ಕಂಡರೆ ಎಷ್ಟು ಪ್ರೀತಿಯೋ ಅಷ್ಟೇ ಭಯವೂ ಇದ್ದಿತು; ಅವಳು ಹೇಳಿದ ಕೆಲಸವು ಎಷ್ಟೇ ಕಷ್ಟವಾಗಲಿ ಕೈಕೊಳ್ಳುತ್ತಿದ್ದನು.

ಹೀಗಿದ್ದರೂ ಕೊನೆಯವರೆಗೂ ಬಾಲಕನಂತೆಯೇ ರಾಮು ಇದ್ದುಬಿಟ್ಟನು—ಇಷ್ಟು ಸಿರ್ಜೀಚನೆಯಾಗಿ ಈ ವಯಸ್ಸಿನಲ್ಲಿರುವುದು ಸಾಧ್ಯವೆ ಎನ್ನುವಂತೆ ಇದ್ದುಬಿಟ್ಟನು. ಒಂದೊಂದು ಸಲ ಮಟ್ಟಿಗೆ ತನ್ನ ತಾಯಿ

ನೆರೆಮನೆಗೆ ಬೀಸುವುದಕ್ಕೆ ಹೋಗುವುದನ್ನು ಕಂಡಾಗ ರಾಮುವಿನ ಕಂಗಳು ಕಂಬನಿಯಿಂದ ತೊಯ್ಯುತ್ತಿದ್ದುದು ನಿಜ. ಆದರೆ ಶೋಕದ ಉದ್ವೇಗವು ಒಂದು ಕ್ಷಣದಲ್ಲಿ ಹಿಂಗಿ ಹೋಗುತ್ತಿದ್ದಿತು. ರಾಮು ಒಂದು ಸೋಜಿಗವಾದ ಮಗು — ಹದಿನೆಂಟನೆಯ ವರುಷ ನಡೆಯುತ್ತಿರುವಾಗಲೂ!

ರಾಮಾಚಾರಿಗೆ ಹದಿನೆಂಟನೆಯ ವರುಷ ನಡೆಯುತ್ತಿರುವಾಗ ಒಂದು ದಿನ ಅವನ ತಾಯಿ ಅರುಣೋದಯಕ್ಕೆ ಇನ್ನೂ ಸ್ವಲ್ಪ ಹೊತ್ತು ಇರುವಾಗಲೇ ಅವನನ್ನು ಎಬ್ಬಿಸಿದಳು. ಇದುವರೆಗೆ, ಅಂಥ ಅವೇಳೆಯಲ್ಲಿ – ಏಕೆ, ಸೂರ್ಯನು ಯದುಗಿರಿಯ ತುದಿಯೇರಿ ಇಣಿಕಿ ನೋಡುತ್ತಿದ್ದರೂ ರಾಮುವನ್ನು ಅವನ ತಾಯಿ ಎಬ್ಬಿಸಿರಲಿಲ್ಲ. ಅಂದು ಹಾಸಿಗೆಯ ಮೇಲೆ ಆಕಳಿಸುತ್ತಾ ಕುಳಿತಾಗ ಅವನಿಗೆ ತನಗೂ ತನ್ನ ತಾಯಿಗೂ ಏನೋ ಒಂದು ಮಹದ್ವಿಪತ್ತು ಕಾದಿರುವುದು ಎಂಬ ಭಾವನೆ ಉದಿಸಿತು.

ರಾಮುವಿನ ತಲೆಯನ್ನು ಸ್ನೇಹದಿಂದ ತಡಹುತ್ತಾ ಅವನ ತಾಯಿ ಹೀಗೆಂದಳು : “ ರಾಮು, ನಾಡಿದ್ದು ನಿಮ್ಮಪ್ಪನ ಶ್ರಾದ್ಧವಪ್ಪ. ಮನೆಯಲ್ಲಾದರೋ ಏನೇನೂ ಇಲ್ಲ — ಒಂದು ಕಾಳು ಅಕ್ಕಿ ಸಹ ಇಲ್ಲ. ನಿಮ್ಮ ದೊಡ್ಡಮ್ಮನ ಹಳ್ಳಿಗೆ ಹೋಗಿ ಏನಾದರೂ ತೆಗೆದುಕೊಂಡು ಬಾ ಮಗು. ನೀನು ಅವರ ಮನೆಗೆ ಹೋಗಿ ಎಷ್ಟೋ ದಿವಸವಾಯಿತು. ಈಗ ಹೋದರೆ ಆದರಿಸಿ ಏನಾದರೂ ಕೊಟ್ಟಾರು. ಏಳಪ್ಪ, ಇದೋ ತಿಂಡಿ, ಮುಖ ತೊಳೆದುಕೊ.” ರಾಮು “ ಇದೇನಯ್ಯ ಗ್ರಹಚಾರ, ಎಷ್ಟು ದೂರ ನಡೆಯಬೇಕು. ನಡೆದರೂ ನಡೆಯೋಣ. ಈ ದಿನದ ‘ ರೌಂಡ್ ರೇಸ್ ’ ಬೇರೆ ತಪ್ಪಿಹೋಗುತ್ತಲ್ಲಾ” ಎಂದು ಗೊಣಗುಟ್ಟಿಕೊಂಡನು. ಆದರೇನು, ನಿಲ್ಲುವುದಕ್ಕಾಗುತ್ತದೆಯೆ? ಮುಖ ಸಾರಿಸಿಕೊಂಡು ತಿಂಡಿ ತಿಂದು ಹೊರಟನು. ಅಯ್ಯೋ, ನಮ್ಮೊಡನಾಡುವುದಕ್ಕೂ ಕಡಲೆಪುರಿ ಹಂಚುವುದಕ್ಕೂ ತಿರುಗಿ ಬಂದನೆ?

ರಾಮು ರಾಂಪುರದ ಹಾದಿಯಲ್ಲಿ ಮೆಲ್ಲನೆ ನಡೆಯುತ್ತಿದ್ದಾಗ ಅರುಣೋದಯದ ಕೆಂಪಳಿದು ಮೂಡಲು ಹೊಂಬಣ್ಣಕ್ಕೇರಿತ್ತು. ಕೂಡಲೆ ಸೂರ್ಯನು ಹುಟ್ಟಿ, ಸ್ವಲ್ಪ ಹೊತ್ತಿನ ಮೇಲೆ ಮಂಜಿನ ತೆಳುಪೊರೆ

ಯೊಳಗೆ ಒಪ್ಪವಿಟ್ಟ ಬೆಳ್ಳಿಯ ಭಾರವಾದ ಗುರಾಣಿಯಂತೆ ಕಾಣಿಸಿಕೊಂಡನು. ಆದರೆ ರಾಮು ಇವುಗಳಿಗೆ ಗಮನಕೊಡದೆ ಸಾಗುತ್ತಿದ್ದನು. ಕಾಡಿನ ಮೌನವು ಅವನಿಗೆ ಭಾರವಾಗಿ ಕಂಡಿರಬೇಕು. ತನ್ನೊಳಗೆ ತಾನೆ ಹಾಡಿಕೊಂಡೋ, ತನಗೆ ತಾನೆ ಮಾತಾಡಿಕೊಂಡೋ ಅವನು ಆ ಮೌನದ ಭಾರವನ್ನು ಇಳಿಸಿರಬೇಕು. ಹನುಮಂತನ ಬಾಲದಂತೆ ಇದ್ದ ಆ ದಾರಿಯನ್ನು ಸ್ವಲ್ಪ ದೂರ ಓಡುತ್ತಾ, ಸ್ವಲ್ಪ ದೂರ ನಡೆಯುತ್ತಾ, ಸ್ವಲ್ಪ ದೂರ ಹಾದಿ ಬಿಟ್ಟು ಹಳ್ಳಕೊಳ್ಳಗಳನ್ನೂ ಹುತ್ತಗಳನ್ನೂ ನೆಗೆಯುತ್ತಾ, ಕಳೆದಿರಬೇಕು. ರಾಮು ಅಷ್ಟು ಚಪಲ ಸ್ವಭಾವದವನು, ಹುಡುಗರಿಗಿಂತ ಹುಡುಗ. ಅಂತು ಅವನು ದಣಿದು ಉಸ್ಸೆಂದು ರಾಂಪುರವನ್ನು ಸೇರಿದಾಗ ಬಿಸಿಲೇರಿತ್ತು.

ಅವನ ದೊಡ್ಡಮ್ಮನ ಮಕ್ಕಳೂ ದೊಡ್ಡಮ್ಮನೂ ಬಹಳ ಸಂಭ್ರಮದಿಂದ ರಾಮುವನ್ನು ಆದರಿಸಿದರು. ರಾಮು ಅವರ ವಿಶ್ವಾಸದ ಹೊನಲಿನಲ್ಲಿ ತನ್ನ ದಾರಿಯ ಶ್ರಮವನ್ನು ತೇಲಿಬಿಟ್ಟನು. ಸಾಯಂಕಾಲದ ಹೊತ್ತಿಗೆ ಮೂಲೆಯಲ್ಲಿ ಬಾಳೆ ಎಲೆ ಮತ್ತು ತರಕಾರಿಯ ಭಾರವಾದ ಮೂಟೆಯೊಂದು ಸಿದ್ಧವಾಯಿತು. ಪಾಪ, ರಾಮುವಿಗೆ ಮೂಟೆಯನ್ನು ಕಂಡು ಹೊರಬೇಕಲ್ಲ ಎಂದು ಸಂಕಟವಾಯಿತೇ ಹೊರತು, ಇಷ್ಟೊಂದು ದೊರಕಿತಲ್ಲ ಎಂದು ಸಂತೋಷವಾಗಲಿಲ್ಲ. ಅವನ ಮನಸ್ಸಿನಲ್ಲಿ ನಾಳೆಯ ಶ್ರಮದ ಕಲ್ಪನೆ ಸುಳಿದು ನೆಮ್ಮದಿಗೆ ಭಂಗ ತಂದಿತು.

ಸಂಜೆ ಆಯಿತು. ಮೂಲೆಯಲ್ಲಿ ಹೊರೆ ನಿಂತಿತು. ಔತಣದ ಅಡಿಗೆಯು ಸಡಗರದಿಂದ ಒಳಗೆ ಸಾಗಿತ್ತು. ಊಟಕ್ಕೆ ಹಜಾರದಲ್ಲಿ ಎಲೆಮನ್ನು ಹರಡಿದ್ದರು. ಖಾದ್ಯವಸ್ತುಗಳ ಸುಗಂಧಕ್ಕೆ ರಾಮುವಿನ ಬಾಯಲ್ಲಿ ನೀರೂರುತ್ತಿದ್ದಿತು. ಆದರೆ ರಾಮು ವೈದಿಕಬ್ರಾಹ್ಮಣನಲ್ಲವೆ? ಸಂಧ್ಯಾವಂದನೆ ಮಾಡದೆ ಊಟಕ್ಕೆ ಕೂರಬಹುದೆ?

ಅಂದಿನಿರುಳು ಕಾರಿರುಳು. ಬಾನಿನ ಕಾಲುಭಾಗವನ್ನು ಕರಿಮೋಡವು ಆಕ್ರಮಿಸಿ ಇರುಳಿನ ಕಪ್ಪನ್ನು ಇಮ್ಮಡಿಸಿತ್ತು. ಸದ್ದಡಗಿತ್ತು. ನೀರವತೆಯು ಹಬ್ಬಿತ್ತು. ಮೃದುವಾಗಿ ಮಂದವಾಗಿ ತಣ್ಣನೆ ಗಾಳಿ ಬೀಸುತ್ತಿತ್ತು. ಅದು ಭಯೋತ್ಪಾದಕ ಕಾಳರಾತ್ರಿ! ವಿಲಯಕ್ಕೆ, ಶಾಂತಿಯ ನೆಮ್ಮದಿಯ ಗಾಂಭೀರ್ಯದ ಜವನಿಕೆಯನ್ನು ಹೊದೆಸಿತ್ತಾ ಕಾಳರಾತ್ರಿ.

ರಾಮಾಚಾರಿ ಲಾಂದ್ರವನ್ನು ಒಂದು ಕೈಯಲ್ಲೂ ಚೆಂಬನ್ನು ಇನ್ನೊಂದು ಕೈಯಲ್ಲೂ ಹಿಡಿದುಕೊಂಡು ಹೊರಕ್ಕೆ ಬಂದನು. ಜನಿವಾರವನ್ನು ಕಿವಿಗೆ ಸಿಕ್ಕಿಸಿಕೊಂಡು ಲಾಂದ್ರವನ್ನು ಕೆಳಗಿಟ್ಟು ಸ್ವಲ್ಪ ದೂರ ಹೋಗಿ ಕುಳಿತುಕೊಂಡನು. ಆದರೆ ಅವನು ಕುಳಿತೆಡೆಯಲ್ಲಿ ಲಾಂದ್ರವು ಬೆಳಕಿಗಿಂತಲೂ ಹೆಚ್ಚಾಗಿ ನೆರಳನ್ನು ಚೆಲ್ಲಿತ್ತು. ರಾಮುವಿಗೆ ತನ್ನ ಕಾಲಿನ ಕೆಳಗೆ ಯಾವುದೋ ಮೆತ್ತಗಿರುವ ವಸ್ತುವು ನುಲಿಯುವ ಅನುಭವ ಮಾತ್ರವಾಯಿತು. ಮಾರುತನ ಸುಖಸ್ಪರ್ಶಕ್ಕೆ ಮೋಹಿಸಿ ಬಿಲದಿಂದ ಹೊರಕ್ಕೆ ಬಂದಿರುವ ಒಂದು ಸರ್ಪದ ಮೇಲೆ ರಾಮು ಕುಳಿತುಬಿಟ್ಟಿದ್ದನು. ಬೆದರಿ ಒಂದು ಸಲ ಹಾವು ಸುತ್ತಿದ್ದ ಕಾಲನ್ನು ಝಾಡಿಸಿ ಒದರಿದನು. ಹಾವು ಸ್ವಲ್ಪ ದೂರದಲ್ಲಿ ಬಿದ್ದಿತು; ಆದರೆ ಮರುಕ್ಷಣವೇ ಅಂಬಿನ ವೇಗದಿಂದ ಹಿಂದಿರುಗಿ ಅವನನ್ನು ಕಚ್ಚಿತು. ರಾಮು ಚೀರುವುದಕ್ಕೆ ಪ್ರಯತ್ನಪಟ್ಟನು. ಭಯ ಕೊರಲನ್ನು ಬಿಗಿಯಿತು. ಗದ್ಗದಸ್ವರದಿಂದ ಅ–ಅ–ಮ್ಮ–ಮ್ಮ ಎಂದು ತೊದಲಿದುದೆಷ್ಟೋ ಅಷ್ಟೆ. ಜ್ಞಾನ ತಪ್ಪಿ ಕೆಳಗೆ ಉರುಳಿದನು – ತಿರುಗಿ ಏಳಲೇ ಇಲ್ಲ.

* * *

ರಾಮಾಚಾರಿಯ ಮರಣವಾರ್ತೆ ಯದುಗಿರಿಯಲ್ಲಿ ಕಾಡುಗಿಚ್ಚಿನಂತೆ ಹಬ್ಬಿತು. ಈ ಸುದ್ದಿ ಅವನ ತಾಯಿಗೆ ಸಿಡಿಲಿನಂತೆ ತಾಗಿತು. ಆಕೆಯ ದುಃಖವನ್ನು ಹೇಳಿತೀರದು. ತಾನೇ ಅವನ ಮರಣಕ್ಕೆ ಕಾರಣಳೆಂದು ಆಕೆಯ ಅಂತಃಕರಣ ತಳಮಳಿಸಿತು. ನಿರಾಶೆ ಆಕೆಯನ್ನು ಜೀವಚ್ಛವವನ್ನಾಗಿ ಮಾಡಿತು. ನಾನು ಆಕೆಗೆ ಎಷ್ಟೋ ಸಮಾಧಾನಗಳನ್ನು ಹೇಳಿದೆನು. ಕನಿಕರದಿಂದ ಆಕೆಯ ಯಾವುದಾದರೊಂದು ಕೆಲಸಕ್ಕೆ ನೆರವಾಗುತ್ತಲೂ ಇದ್ದೆನು. ಆದರೆ ನನ್ನ ಮರುಕ ಆ ಕಂಬನಿಯನ್ನು ಹೆಚ್ಚಿಸುತ್ತಿದ್ದಿತೇ ಹೊರತು ಅಳಲ ವೇಗವನ್ನು ತಡೆಯುತ್ತಿರಲಿಲ್ಲ. ಇಂಥ ಕನಿಕರವೂ ಉಪಕಾರಗಳೂ ರಾಮುವಿನ ಸಾವಿನಿಂದ ಆಕೆಯ ಬಾಳಿನಲ್ಲಿ ತೋರಿದ ಅರಕೆಯನ್ನು ಇನ್ನೂ ಆಳವಾಗಿ ಮಾಡುತ್ತಿದ್ದುವೇ ಹೊರತು ಮುಚ್ಚಲು ಸಹಕಾರಿಯಾಗುತ್ತಿರಲಿಲ್ಲ.

ಅವನ ಮರಣಕ್ಕೆ ನಾವು ತಲ್ಲಣಿಸಿದೆವು. ಅವನು ಸತ್ತ ಸುದ್ದಿ

ನಮಗೆ ಮುಟ್ಟುತ್ತಲೇ ನಮ್ಮ ಧಮನಿಯಲ್ಲಿ ರಕ್ತವು ಸ್ತಬ್ಧವಾದಂತಾಯಿತು. ಎದೆಯಲ್ಲಿ ನಡುಕ ಹುಟ್ಟಿತು. ನಮ್ಮ ಹುಡುಗುತನವು ಉಡುಗಿತು. ನಮ್ಮಾತ್ಮಕ್ಕೆ ಸೋಜಿಗದ ಮೌನವೊಂದು ನುಸುಳಿತು. ಆ ಸುದ್ದಿಯನ್ನು ಕೇಳಿದ ದಿನ ನಾವು ನಮ್ಮ ಚಿಕ್ಕ ಆಟದ ಮೈದಾನದಲ್ಲಿ ನೆರೆದು ಗರಿಕೆಯ ಮೇಲೆ ಕತ್ತಲೇರುವವರೆಗೂ ಸದ್ದಿಲ್ಲದೆ ಕುಳಿತುಬಿಟ್ಟೆವು. ಒಬ್ಬರಿಗೂ ಒಂದು ಮಾತನ್ನೂ ಆಡಲಾಗಲಿಲ್ಲ. ಸಾವಿನ ಭಾವನೆ ನಮ್ಮ ಆತ್ಮಕ್ಕೆ ಮೌನದ ಮುದ್ರೆಯನ್ನು ಹಾಕಿತ್ತು. ಎಲ್ಲರೂ ನೀರವರಾಗಿ ನೀರವತೆಯ ಕಾಣಿಕೆಯನ್ನು ರಾಮುವಿನ ಆತ್ಮಕ್ಕೆ ಸಲ್ಲಿಸಿದೆವು. ಹಲವರು ಜೊತೆಗೆ ಕಣ್ಣೀರಿನ ಕಾಣಿಕೆಯನ್ನೂ ಕೊಟ್ಟರು. ನಮ್ಮ ಆಟದ ಮೈದಾನವು ಎಂದಿನಂತೆ ನಗೆಯಿಂದಲೂ ಕೇಕೆಯಿಂದಲೂ ತುಂಬುವುದಕ್ಕೆ ಒಂದು ತಿಂಗಳು ಹಿಡಿಯಿತು.

ಆದರೆ ರಾಮಾಚಾರಿಯ ಮರಣವು ನನ್ನ ಬಾಳಿನಲ್ಲಿ ಹೇರಾರೂ ತುಂಬದಂಥ ಅರಕೆಯನ್ನು ಕಾಣಿಸಿತು. ಆಗಾಗ, ಆಟದ ಮಧ್ಯದಲ್ಲಿ ಆವುದೋ ಒಂದು ವಿಷಣ್ಣತೆ ನನ್ನ ಮನದಲ್ಲಿ ಮೂಡಿದಾಗ, ಹುಡುಗರ ಅನ್ಯಾಯದ, ಅನೌದಾರ್ಯದ ನಡತೆಗಳು ರಾಮುವಿಲ್ಲದ ಕೊರಗನ್ನು ಹೆಚ್ಚಿಸಿದಾಗ, ನಾನು ಅವನ ಮನೆಗೆ ಓಡಿಬಿಡುತ್ತಿದ್ದೆನು. ಅಲ್ಲಿ ಅವನ ತಾಯಿ ಬೀಸುತ್ತಾ ಕುಳ್ಳಿರುತ್ತಿದ್ದಳು. ಒಳಕ್ಕೆ ಹೋಗಿ ಬೀಸುವ ಕಲ್ಲಿನ ಗೂಟಕ್ಕೆ ನಾನೂ ಕೈಹಾಕುತ್ತಿದ್ದೆನು. ಆಗ ಆಕೆಯ ಕಣ್ಣುಗಳಿಂದ ಧಾರಾಕಾರವಾಗಿ ಉಕ್ಕಿಬರುತ್ತಿದ್ದ, ಆಗಾಗ ನನ್ನ ಕಣ್ಣುಗಳನ್ನೂ ನೆನೆಸುತ್ತಿದ್ದ, ಕಂಬನಿ ಮಾಲೆ ನಮ್ಮ ಅಳಲ ಹೊರೆಯನ್ನು ಕಳೆದು ಸ್ವಲ್ಪ ಸಮಾಧಾನವನ್ನು ಮನಸ್ಸಿಗೆ ತರುತ್ತಿದ್ದಿತು.

ಆಹಾ, ಕಣ್ಣೀರೇ, ಮಾನವನಿಗುಳಿದಿರುವ ಒಂದೇ ಸಮಾಧಾನ ಸಾಧನವೆ!

* * *

ಕೆಲವು ವೇಳೆ ಇರುಳಿನಲ್ಲಿ ಆಗಸಕ್ಕೆ ಮೊಗವೆತ್ತಿ ಅಲ್ಲಿ ನಾನು ದೃಷ್ಟಿಯನ್ನು ನೆಡುವಾಗ, ನೀಲನೆಲದೊಳಗೆ ಹರಡಿರುವ ಕಿರುತಾರಗೆಗಳ ತಿಂತಿಣಿ ಸಾರಿಸಿದ ನೆಲದ ಮೇಲೆ ಚೆಲ್ಲಿರುವ ಕಡಲೆಪುರಿಯನ್ನು ನೆನಪಿಗೆ

ತರುವಾಗ, ಅಲ್ಲೆ ನೀಲಪಟದ ಹಿಂದೆಯೆ ರಾಮು ಅವಿತಿದಾನೆ, ಮತ್ತು ನಾನು ಎಟುಕಿಸಬಲ್ಲೆನಾದರೆ ಅದಷ್ಟನ್ನೂ ನನಗೀಯುತ್ತಾನೆ ಎಂಬ ಭಾವನೆ ಉದಿಸದಿರುವುದಿಲ್ಲ. ಆಹಾ — ಎಟುಕಿಸಬಲ್ಲೆನಾದರೆ!

# ನನಸಿಗಿಂತಲೂ ನಿಜವಾದ ಒಂದು ಕನಸು

ರತ್ನಂ, ರತ್ನಂ, ರತ್ನಂ — ಮಧುರವಾದ ಹೆಸರು, ಸೋಜಿಗವಾದ ಹೆಸರು, ಪವಿತ್ರವಾದ ಹೆಸರು.

ಈಗ ಆರು ವರುಷಗಳ ಹಿಂದಿನ ಮಾತು. ಆಗ ಆ ಹೆಸರನ್ನು ಹೇಳುವುದಕ್ಕೆ ನನಗೇಕೋ ನಾಚಿಕೆ. ನನ್ನ ಕಿರುಮನೆಯಲ್ಲಿ, ಯಾರೂ ಇಲ್ಲದಿರುವಾಗ ಮೆಲ್ಲನೆ, ಬಲುಮೆಲ್ಲನೆ, ಪಿಸುಮಾತಿನಲ್ಲಿ, ಆ ಹೆಸರನ್ನು ಉಚ್ಚರಿಸಿದಾಗ ಮೈನವಿರೇಳುತ್ತಿತ್ತು, ಪುಳಕ ಹುಟ್ಟುತ್ತಿತ್ತು. ಅನೇಕ ವೇಳೆ ಆ ಹೆಸರನ್ನು ಗಟ್ಟಿಯಾಗಿ ಹೇಳಬೇಕೆಂದೇ ನಾನು ತೊರೆಯ ಕಣಿವೆಗೆ ಓಡಿಬಿಡುತ್ತಿದ್ದುದುಂಟು. ಸಂಧ್ಯಾಸಮಯದಲ್ಲಿ ಪೂರ್ವದಿಗಂಗನೆಯ ಈರ್ಷೆ ಆ ದಿಗಂತದಲ್ಲಿ ಸಂಧ್ಯಾರುಣರೂಪದಲ್ಲಿ ಹೊರಹೊಮ್ಮಿದಾಗ ತೊರೆಯ ಮಳಲೊಟ್ಟಿನಲ್ಲಿ ಮಲಗಿ ರತ್ನಂ ರತ್ನಂ ರತ್ನಂ ಎಂದು ನುಡಿಯುತ್ತಿದ್ದಾಗ ನನಗೆ ಎಷ್ಟು ಸುಖವುಂಟಾಗುತ್ತಿತ್ತು! ಪ್ರಕೃತಿದೇವಿಯ ಗುಡಿಯ ಆ ಮೌನದಲ್ಲಿ ನನಗೆ ಆ ಹೆಸರನ್ನು ಉಚ್ಚಾರ ಮಾಡುವುದಕ್ಕೆ ಹೆದರಿಕೆಯಾಗುತ್ತಿರಲಿಲ್ಲ. ಉಚ್ಚಕಂಠದಲ್ಲಿ ನುಡಿಯುವುದಕ್ಕೂ ನಾಚಿಕೆಯಾಗುತ್ತಿರಲಿಲ್ಲ. ಅಲ್ಲಿ ಆ ಧ್ವನಿ ಒಳಗೆ ನನ್ನೆದೆಯ ತಂತಿಯನ್ನು ಮೀಟಿ, ಪ್ರತಿ ರಕ್ತಕಣಗಳಲ್ಲಿಯೂ ಬೆರೆದು, ನಾಳಗಳಲ್ಲಿ ಮಿಡಿದು, ಎದೆಯರಳಿಸಿ, ಆತ್ಮವನ್ನು ತುಂಬುತ್ತಿತ್ತು; ಹೊರಗೆ, ತೊರೆಯ ಶ್ರುತಿಯಲ್ಲಿ ಲೀನವಾಗಿ, ಹಕ್ಕಿಗಳ ಹಾಡಿನಲ್ಲಿ ಬೆರೆದು, ಮುಗಿಲ ತಿಳಿಬಣ್ಣಗಳ ಅಂಚಿನಲ್ಲಿ ಹರಿಯುವ ನೀಲಿಮದಲ್ಲಿ ಮಿಂದು, ಚಕ್ರವಾಳದಲ್ಲಿ ಪ್ರತಿಧ್ವನಿತವಾಗಿ, ವಿಶ್ವವ್ಯಾಪಿಯಾಗುತ್ತಿತ್ತು. ಯೋಗಿಗಳಿಗೆ ಓಂಕಾರದಂತೆ, ಪವಿತ್ರವಾದ ಮುಗ್ಧಮಧುರವಾದ ಆ ಹೆಸರು ನನಗೆ ಭಾವಾವೇಶವನ್ನು ತಂದು ಬಾಳನ್ನು ಒಂದು ದೇಗುಲವನ್ನಾಗಿ ಮಾಡುತ್ತಿತ್ತು. ಅಂಥ ಹೆಸರನ್ನು ಎಲ್ಲರೆದುರಿಗೂ ಹೇಳುವುದೆ?

ಆ ಹೆಸರು ನಿರ್ದೇಶಿಸಿದ ದೇವಿಯೋ? ಆ ಮೂರ್ತಿಯನ್ನು ನೆನೆಯು

ವುದಕ್ಕೆ ನೆನಪು ಹಿಂಜರಿಯುತ್ತದೆ. ಬಣ್ಣಿಸುವುದಕ್ಕೆ ನುಡಿ ನಾಚುತ್ತದೆ. ಆರು ವರುಷಗಳ ಹಿಂದಿನ ಮಾತು. ಅವಳು ಆಗ ಮುಗ್ಧೆ. ನನಗೆ ಅವಳು ಈಗಲೂ ಮುಗ್ಧೆಯೇ. ನೆನಪಿನಲ್ಲುಳಿದ ಆ ಭಾವಚಿತ್ರಕ್ಕೆ ಕಾಲದಿಂದ ಉಪಹತಿಯಿಲ್ಲ, ಸುಖದುಃಖಗಳ ಸೋಂಕಿಲ್ಲ. ಅಮೃತಮಯವಾದ ಸೌಂದರ್ಯವದು. ಒಂದೊಂದು ವೇಳೆ ಅದು ನೆನಪಿನಲ್ಲಿ ಮಿಂಚಿದಾಗ ತಿಮಿರದಲ್ಲಿ ನಿಂತು ಜ್ಯೋತಿಯನ್ನು ಕಂಡಂತಾಗುತ್ತದೆ, ಕಣ್ಣು ಕೋರೈಸುತ್ತದೆ, ಹೊಸ ಬಾಳು ಮೂಡುತ್ತದೆ.

ಇಂದು ಅವಳೊಂದು ಸವಿಗನಸು. ಕಹಿಗನಸೂ ಹೌದು.

ನಾನು ಅವಳನ್ನು ಪ್ರೀತಿಸುತ್ತಿದ್ದೆನೆಂದು ಹೇಳಲಾರೆ. ಪೂಜಿಸುತ್ತಿದ್ದೆನೆಂಬುದು ನಿಜ. ನಾನು ಹುಟ್ಟಿದ ಮೊದಲುಗೊಂಡು ಅವಳನ್ನು ಹುಡುಕುತ್ತಿದ್ದೆನೆಂದು ತೋರುತ್ತದೆ. ಅವಳೇ ನನ್ನ ಬಾಳಿನ ಗುರಿ ಎಂದೋ ಏನೋ. ಅದೊಂದು ಮಬ್ಬು ಬಯಕೆ. ಒಲುಮೆಯೂ ಒಂದು ಮಬ್ಬು ಬಯಕೆ. ತನ್ನಾತ್ಮಪೂರ್ಣತೆಯನ್ನು ಹೊರಗಿನ ಮತ್ತೊಂದು ವ್ಯಕ್ತಿಯಿಂದ ಹೊಂದಬಹುದೆಂಬ ನಚ್ಚು ಅದಿರಬಹುದು. ಅದರ ಗುಟ್ಟು ಇನ್ನೂ ಹರಿದಿಲ್ಲ. ಇಷ್ಟನ್ನು ಮಾತ್ರ ಹೇಳಬಲ್ಲೆ. ಅದೊಂದು ಆತ್ಮನಿವೇದನ ಭಾವ. ರತ್ನಳಿಗೆ ನನ್ನಾತ್ಮವನ್ನು ನಿವೇದಿಸಿದ್ದೆ. ಅಷ್ಟು ಗೊತ್ತು ನನಗೆ.

ಈ ಆತ್ಮನಿವೇದನದ ಅರಿವು ಅವಳಿಗಿತ್ತೋ ಇಲ್ಲವೋ ನನಗೆ ತಿಳಿಯದು. ಜನವಾರ್ತೆ ನಮ್ಮಿಬ್ಬರನ್ನೂ ಮುಂದಿನ ಗಂಡಹೆಂಡಿರನ್ನಾಗಿ ಮಾಡಿತ್ತು. ಆದರೂ ಅವಳಿಗೆ ನನ್ನಲ್ಲಿ ಸಲಿಗೆ ಹೆಚ್ಚು, ನಾಚಿಕೆ ಇರಲಿಲ್ಲ. ನನ್ನನ್ನು ಹೆಸರು ಹಿಡಿದು ಕೂಗುವಳು. ಪ್ರೇಮವಿರಲಿಲ್ಲವೆಂದೂ ಹೇಳಲಾರೆ. ಹೊಸಸೀರೆಯುಟ್ಟ ದಿನ, ಹೊಸಕುಪ್ಪಸ ತೊಟ್ಟ ದಿನ, ತಾನು ಇಂದು ಎಂದಿಗಿಂತಲೂ ಹೆಚ್ಚು ರೂಪವತಿಯೆಂದು ಕನ್ನಡಿಯು ನುಡಿದ ವೇಳೆಗಳಲ್ಲಿ, ಅವಳು ನನ್ನನ್ನು ಯಾವುದಾದರೊಂದು ನೆಪದಿಂದ ನೋಡುತ್ತಿದ್ದುದು ನಿಜ. ಅವಳನ್ನು ಕಾಣುವುದಕ್ಕೆ ನನ್ನೆದೆ ತುಡಿದುಕೊಳ್ಳುತ್ತಿತ್ತೆಂದೇ ನನ್ನ ಸ್ವಾರ್ಥಭಾವನೆ. ಆದರೂ ನನ್ನ ಪ್ರಣಯದ ಆಳವನ್ನು ಅವಳರಿಯಳು. ಅವಳಿಗೆ ಹೇಗೆ ಗೊತ್ತಾಗಬೇಕು? ಗೊತ್ತುಮಾಡಿಕೊಡುವ ಸಂದರ್ಭವೆಲ್ಲಿ ದೊರೆಯಬೇಕು? ಅದೊಂದು ನನ್ನ ಕೊರಗು. ಈ ಕೊರಗು ಕನಸುಗಳನ್ನು ಆಗಾಗ ತರುತ್ತಿತ್ತು.

ರತ್ನ ನಮ್ಮ ಪಕ್ಕದಮನೆ ಹುಡುಗಿ. ಅವಳ ಮನೆಗೂ ನಮ್ಮ ಮನೆಗೂ ಹತ್ತಿರದಲ್ಲಿ ಒಂದೇ ಭಾವಿ. ಭಾವಿಯ ಹತ್ತಿರ ನೀರು ಸೇದುವ ನೆವದಿಂದ ರತ್ನ ನನ್ನನ್ನೂ, ನಾನು ರತ್ನಳನ್ನೂ, ಎಷ್ಟೋ ಸಲ ನೋಡಿದ್ದೇವೆ. ಭಾವಿಯ ಅಗಲ ಹೆಚ್ಚು. ಒಂದೇ ರಾಟೆ. ಅವಳು ಚೆಂಬಿನಲ್ಲಿ ನೀರು ಸೇದುವಾಗ ಬಹಳ ಬಗ್ಗಿ, ಕಟ್ಟೆಯ ಮೇಲೆ ಹೊಟ್ಟೆಯೂರಿ ಕಾಲುಗಳನ್ನೆತ್ತಿ ಆ ಚೆಂಬನ್ನು ತೆಗೆದುಕೊಳ್ಳಬೇಕಾಗಿತ್ತು. ಆ ಪ್ರಯತ್ನದಲ್ಲಿ ಅವಳು ಯಾವತ್ತಾದರೂ ಭಾವಿಗೆ ಬೀಳುತ್ತಾಳೆಂದು ನನಗೆ ಹೆದರಿಕೆ ಯೊಳಗೆ ಆಸೆ ಬೇರೆ. ಬೀಳುವ ಸಂದರ್ಭದಲ್ಲಿ ನಾನು ಅವಳನ್ನು ಉಳಿಸಬಹುದೆಂಬ ಆಸೆ. ಆಗ ನಾನು ಹಗ್ಗದಿಂದ ಸರ್ರನೆ ಭಾವಿಯೊಳಕ್ಕೆ ಜಾರಿ ಅವಳನ್ನು ಮುಟ್ಟಬಹುದು. ಮುಟ್ಟಿ ಮೇಲಕ್ಕೆತ್ತಬಹುದು. ಸಾಮಿಪ್ಯದ ಸ್ವರ್ಗವನ್ನನುಭವಿಸಬಹುದು. ಅವಳ ತೋಳುಗಳು ಹೂದಂಡೆಯಂತೆ ನನ್ನ ಹೆಗಲ ಮೇಲೆ ಕೊರಳು ಬಳಸಿ ಬೀಳುವುವು. ಆಗ ಅವಳ ತೊಯ್ದ ಕುರುಳುಗಳಿಗೆ ಮೆಲ್ಲನೆ ಮುಟಿಯೊತ್ತಬಹುದು. ರತ್ನಳನ್ನು ಹತ್ತಿರದಲ್ಲಿ ದೃಷ್ಟಿಸಬಹುದು. ಕಾತರಗೊಂಡು ವಿಸ್ಫಾರಿತವಾಗಿ ತಲ್ಲಣಿಸುವ ಕಣ್ಣುಗಳನ್ನು ನೋಡಿ ನಗಬಹುದು. ಸಲ್ಲಾಪಗಳಿಂದ ಆಕೆಯ ಭಯವನ್ನೊರಸಬಹುದು. ಅದೆಂತಹ ಅನುಭವ! ಇದೆಲ್ಲಾ ಹೋಗಲಿ, ಎಲ್ಲಕ್ಕಿಂತಲೂ ಹೆಚ್ಚಾಗಿ ರತ್ನಳಿಗೆ ನನ್ನ ಮೇಲೆ ಒಲುಮೆ ಹೆಚ್ಚುವುದು. ಅವಳ ಮೇಲೆ ನನ್ನ ಹಕ್ಕೂ ದೃಢಗೊಳ್ಳುವುದು. ಎಂತಹ ಘಟನೆ!

ರತ್ನ ಭಾವಿಗೆ ಬೀಳದಿದ್ದರೆ ಚಿಂತೆಯಿಲ್ಲ; ಅವಳಿಗೆ ಅಪಾಯವಾಗಬಹುದೇನೋ. ಮನುಷ್ಯನಿಗೆ ಎಷ್ಟೋ ಸಣ್ಣ ಸಣ್ಣದಾಗಿ ಮೊದಲು ತೋರಿದರೂ ಪರಿಣಾಮಭಯಂಕರಗಳಾದ ಅಪಾಯಗಳು ಸಂಭವಿಸುವುದುಂಟು. ಬೀದಿಯಲ್ಲಿ ಹೋಗುತ್ತಿರುವಾಗ ಜೂಲು ನಾಯಿಗಳು ರತ್ನಳನ್ನು ಅಟ್ಟಿಸಿಕೊಂಡು ಬರಬಹುದು. ಬಂದರೆ, ಅದೆಂತಹ ನಾಯಾದರೂ ಆಗಲಿ, ಓಡಿಹೋಗಿ ಒಂದು ಕೈಯಿಂದ ರತ್ನಳನ್ನು ಸೆಳೆದುಕೊಂಡು ಮತ್ತೊಂದು ಕೈಯನ್ನು ನಾಯ ಬಾಯಿಗೆ ತುರುಕಿ ಉಸಿರು ಸಿಕ್ಕಿಸಿ ಕೊಂದುಬಿಡುವೆನು. ಹಸುವಾಗಲಿ ಗೂಳಿಯಾಗಲಿ ತಿವಿಯುವುದರಲ್ಲಿದ್ದರೆ ಅವುಗಳ ಕೋಡುಗಳಿಗೆ ಜಗ್ಗಿ ಬಿದ್ದು ಕತ್ತನ್ನು ತಿರುವಿ ರತ್ನಳನ್ನು ಉಳಿಸುವೆನು. ಅವಳಿಗಾಗಿ

ನಾನು ಹೆಣೆಯುತ್ತಿದ್ದ ಇಂಥ ಕನಸುಗಳೆಷ್ಟೊ. ಅವುಗಳನ್ನು ಈಗ ನೆನೆದು ಕೊಂಡರೆ ನಗು ಬರುತ್ತದೆ. ಎಂತಹ ಚಲನ ಚಿತ್ರದ ಶೂರನೂ ತನ್ನಿನಿಯ ಳಿಗೆ ನಾನು ರತ್ನಳಿಗೆ ನೆರವಾಗುವಂತೆ ನೆರವಾಗಲಾರ. ಕನಸಿನಲ್ಲಿ ನಾನು ರತ್ನಳನ್ನು ಅಪಾಯಕ್ಕೆ ಸಿಕ್ಕಿಸುತ್ತಿದ್ದ ಸನ್ನಿವೇಶಗಳನ್ನು ಯಾವ ಚಲನ ಚಿತ್ರವೂ ತೋರಲಾರದು.

ಒಂದು ದಿನ ರಾತ್ರಿ, ಆರು ವರುಷಗಳ ಹಿಂದೆ, ನನ್ನ ಕಿರುಮನೆಯಲ್ಲಿ ಮಲಗಿದ್ದೆ. ಸೂರಿನ ಸಂದಿಯಿಂದ ಚಂದ್ರಕಿರಣವೊಂದು ಒಳಕ್ಕೆ ನುಸಿದಿತ್ತು. ಅರ್ಧ ನಿದ್ದೆ; ಅರ್ಧ ಎಚ್ಚರ. ಹೊರಗೆ ಬಹಳ ಸೊಗಸಾಗಿರಬೇಕೆಂದು ಕೊಂಡೆ. ಆಮೇಲೆ ಹೊರಗೆ ಹೋಗೋಣ ಎನ್ನಿಸಿತು.

ಶಾಂತಿಮಯವಾದ ಪ್ರಪಂಚವದು. ಜಗತ್ತು ನಿದ್ರೆಯ ಮಡಲಿನಲ್ಲಿ ಬಿಡುವನ್ನು ಹೊಂದಿತ್ತು. ಗವ್ಮೆಂಬ ನಿಶ್ಶಬ್ದ. ಅಷ್ಟು ಗಾಢವಾದ ಮೌನ ವನ್ನು ನಾನು ಹಿಂದೆ ಎಂದೂ ಕಂಡಿರಲಿಲ್ಲ. ಅವಿಚ್ಛಿನ್ನವಾದ ನೀರವತೆ. ಗಾಳಿಯಲೆದು ಎಲೆಗಳು ಕೂಡ ಅಲುಗುತ್ತಿರಲಿಲ್ಲ. ಜೀರುಂಡೆಗಳೂ ಜಿರ್ರೆನ ಲಿಲ್ಲ. ಆಕಾಶದಲ್ಲಿ ಪೂರ್ಣಚಂದ್ರನೊಬ್ಬನೇ, ಒಂಟಿ. ಚಂದ್ರಿಕೆ ಬಿಸಿಲಿ ನಂತೆ ಉಜ್ವಲವಾಗಿತ್ತು; ನಿಶಿಯ ನೀರವತೆಯನ್ನು ಹೊರಲಾರದೆ ಜಡವಾಗಿ ತ್ತೆಂದೂ ತೋರಿತು. ನಕ್ಷತ್ರಗಳು ದೂರದಲ್ಲಿ ಒಂದೋ ಎರಡೋ ಮಿನುಗು ತ್ತಿದ್ದುವು. ವಿಚಿತ್ರವಾದ ಶೋಭೆ. ಅಪೂರ್ವವಾದ ನೀರವತೆ. ನೋಡಿದೆ. ಆನಂದದ ಮಧ್ಯದಲ್ಲಿ ಭಯವಂಕುರಿಸಿತು.

ಸುತ್ತಲೂ ಬೆಟ್ಟಗಳು. ಎಲ್ಲೋ ಕೆಳಗೆ ಒಂದೆರಡು ಮರಗಳು. ಕಾಡಲ್ಲ, ಬಯಲಲ್ಲ, ಮರುಭೂಮಿಯಲ್ಲ. ಒಂದು ಗುಡ್ಡ; ಕಲ್ಲು ಬಂಡೆಗಳ ರಾಶಿ. ಒಂದು ಬಂಡೆಯಿಂದ ಇನ್ನೊಂದು ಬಂಡೆಗೆ ಹಾರಿಹೋಗಬಹು ದಾಗಿತ್ತು. ಆ ಗುಡ್ಡದ ತುದಿಯಲ್ಲಿ ನಾನೊಬ್ಬನೆ—ಒಬ್ಬನೆ. ನಮ್ಮೂರಿ ನಿಂದ ಬಹಳ ದೂರ ಬಂದಿದ್ದೆನೆಂದು ತೋರಿತು. ಹೆದರಿದೆ. ನಡುಕ ಹುಟ್ಟಿತು. ಜೀವಭಯದಿಂದ ಬಂಡೆಯಿಂದ ಬಂಡೆಗೆ ಕುಪ್ಪಳಿಸಿ ಓಡಹತ್ತಿದೆ. ಆ ನಿಶ್ಶಬ್ದದಲ್ಲಿ ಕಾಲಿನ ಸಪ್ಪಳ ಗುಡುಗಿನಂತೆ ಕೇಳಿಸಿತು. ಐದು ನಿಮಿಷಗಳು ಹೀಗೆ ಓಡಿರಬಹುದು. ದಣುವಾರಿಸಿಕೊಳ್ಳಬೇಕೆಂದು ಸ್ವಲ್ಪ ಹೊತ್ತು ಒಂದು ಬಂಡೆಯ ಮೇಲೆ ನಿಂತೆ. ನನ್ನೆದೆ ಜಲಪಾತದಂತೆ

ಢಡಢಡ ಎಂದು ಹೊಡೆದುಕೊಳ್ಳುತ್ತಿತ್ತು. ದಣುವಾರಿಸಿಕೊಂಡು ಮುಂದೆ ಹೊರಡಲನುವಾಗಿ ಒಂದಡಿ ಮುಂದಿಟ್ಟು ನೋಡಿದೆ. ಭೀಕರವಾದ ನೋಟವದು. ನನ್ನ ಕಾಲಿನ ಅಡಿಯಲ್ಲಿ ಒಂದು ಅಗಾಧವಾದ ಕಮರಿ ಬಿರಿದಿತ್ತು. ನೋಡಿ ಎದೆ ನಡುಗಿತು. ನಿಂತಿದ್ದ ಬಂಡೆಯ ಮೇಲೆ ಕುಳಿತುಬಿಟ್ಟೆ.

ಕಮರಿ ಹತ್ತು ಅಡಿ ಅಗಲವಿರಬಹುದು. ಆದರೆ ಅದರ ಆಳ ಪತ್ತೆಯಾಗಲಿಲ್ಲ. ಅರವತ್ತು ಎಪ್ಪತ್ತು ಆಳುದ್ದವಿರಬಹುದೆಂದು ನನ್ನ ಊಹೆ. ಗುಡ್ಡ ಇದ್ದಕ್ಕಿದ್ದ ಹಾಗೆ ಬಿರಿದಂತೆ ತೋರಿತು. ಆ ಕಮರಿ ದಾಟಿದರೆ ನಮ್ಮೂರು. ಆದರೆ ದಾಟುವುದು ಹೇಗೆ? ಅದು ಅಸಾಧ್ಯ. ಇಲ್ಲದೆ ಹೋದರೆ ಗುಡ್ಡವನ್ನು ಬಲಗಡೆ ಇಳಿದು ಒಂದು ಹರಿದಾರಿ ಬಳಸಿಕೊಂಡು ಹೋಗಬೇಕು. ಈ ಮೌನದಲ್ಲಿ, ಬಿಸಿಲಿನಂತಿರುವ ಭೀಕರವಾದ ಈ ಚಂದ್ರಿಕೆಯಲ್ಲಿ, ಅಷ್ಟು ದೂರ ನಡೆಯಬೇಕು. ಕಷ್ಟ—ಬಹು ಕಷ್ಟ. ಮುಂದೇನು ಗತಿ ಎಂದು ನಿಟ್ಟುಸಿರಿಟ್ಟೆ.

ಹೀಗೆ ಹತ್ತು ನಿಮಿಷಗಳು ಕುಳಿತಿರಬಹುದು. ಇರುಳಿನ ಮೌನ ಸ್ವಲ್ಪ ಕ್ಷುಬ್ಧವಾದಂತೆ ತೋರಿತು. ಯಾವುದೋ ಒಂದು ದೀರ್ಘವಾದ, ಸೂಕ್ಷ್ಮವಾದ, ನೆರಳಿಕೆಯೋ, ಅಳುವೋ, ನರಿಯ ಕೂಗೋ, ನಿಶ್ಶಬ್ದದ ಭಾಂಡವನ್ನು ಸೀಳುವಂತೆ ಭಾಸವಾಯಿತು. ಇರುಳಿನ ಮೌನವನ್ನು ಸಹಿಸಲಾರದೆ ಮನಸ್ಸು ಈ ತೆರೆದ ಮಾಯೆಯನ್ನು ಕಲ್ಪಿಸಿಕೊಂಡಿದೆ ಎಂದುಕೊಳ್ಳುವಷ್ಟರಲ್ಲಿ ಆ ಧ್ವನಿ ಸ್ವಲ್ಪ ಸ್ಫುಟವಾಗಿ ಕೇಳಹತ್ತಿತು. ತಿರುಗಿ ಮೌನ — ಕೊಳದ ನೀರನ್ನೆಲ್ಲಾ ಮುಚ್ಚಿ ಹರಡಿರುವ ಪಾಚಿ ಸ್ವಲ್ಪ ಕದಲಿಸಿದ ಮೇಲೆ ತಿರುಗಿ ಒಟ್ಟುಗೂಡುವಂತೆ—ತಿರುಗಿ ಮೌನ. ಆಮೇಲೆ ಆ ಧ್ವನಿ, ಆರ್ತಧ್ವನಿ. ನರಿಯ ಕೂಗಲ್ಲ. ಮನುಷ್ಯರ ನೋವಿರಬಹುದು. ನನಗೆ ದೆವ್ವಗಳಲ್ಲಿ ನಂಬಿಕೆಯಿಲ್ಲ. ಮನುಷ್ಯರದಾದರೆ ಯಾರದು? ನಮ್ಮೂರಿನವರೊಬ್ಬರದೇನೋ. ಆಲಿಸಿ ಕೇಳಿದೆ. ರೋದನವು ಸ್ಫುಟತರವಾಯಿತು. ಧ್ವನಿ ಕಮರಿಯೊಳಗಿನಿಂದ ಬರುತ್ತಿತ್ತು. ಸ್ತ್ರೀಕಂಠ — ಹುಡುಗಿಯ ಕಂಠ. ಹ್ಞ! ರತ್ನಳ ಕಂಠ. ಎದೆಯು ಜಲಪಾತ ಘನಿಸಿದಂತೆ ತೋರಿತು.

ಕಮರಿಯ ಬಾಯಲ್ಲಿ ಗಿಡವೊಂದು ಬೆಳೆದಿತ್ತು. ಅದನ್ನು ಹಿಡಿದು ಬಗ್ಗಿ ನೋಡಿದೆ. ಅಬ್ಬ, ತಳ ಕಾಣಲಿಲ್ಲ. ಚಂದ್ರನ ಬಿಸಿಲು ಅದರ ಅರ್ಧ ಬಾಯನ್ನು ಮುಚ್ಚಿ ಎದುರು ದಡದ ಗೋಡೆಯ ಕೆಳಕ್ಕೆ ಸ್ವಲ್ಪ ದೂರ ಬೆಳಗಿತ್ತು. ಮಿಕ್ಕಡೆಯೆಲ್ಲಾ ಮಸುಕುಮಸುಕಾದ ಕತ್ತಲೆ. ಕೆಳಕ್ಕೆ ಹೋಗುತ್ತಾ ಹೋಗುತ್ತಾ ಕಗ್ಗತ್ತಲೆ. ಆ ಕಗ್ಗತ್ತಲೆಯ ಕೊಳದಲ್ಲಿ ಸುಳಿಯ ಯಂತೆ ಆಗಾಗ ಆ ಆರ್ತಧ್ವನಿ ಏಳುತ್ತಿತ್ತು. ಖಂಡಿತ, ಅದು ರತ್ನಳದೇ. ನನ್ನ ರತ್ನ ಕಮರಿಯಲ್ಲಿ ಬಿದ್ದಿದ್ದಾಳೆ. ನಾನು ಅವಳಿಗೆ ನೆರವಾಗುವ ಅದೃಷ್ಟ ಆಕಸ್ಮಿಕವಾಗಿ ಇಂದು ನನಗೊದಗಿದೆ. ಆದರೆ ಹೇಗೆ? ಕಮರಿ ಯನ್ನು ತಿರುಗಿ ಬಗ್ಗಿ ನೋಡಿದೆ. ಎದೆ ನುಚ್ಚುನೂರಾಯಿತು.

ಆದರೆ ಆ ಆಕ್ರಂದನವು ನಿಮಿಷ ನಿಮಿಷಕ್ಕೂ ಹೆಚ್ಚು ಸ್ಫುಟವಾಗಿ ಹೆಚ್ಚು ನಿಡಿದಾಗಿ, ದೈನ್ಯತರವಾಗುತ್ತಿತ್ತು. "ನಾಣು, ನಾಣು" ಎಂದು ರತ್ನ ನನ್ನನ್ನು ಕರೆಯುವಂತೆ ತೋರಿತು. ಕೇಳಿ ನುಚ್ಚುನೂರಾದ ಎದೆ ತಿರುಗಿ ಬೆಸೆದು ಗಟ್ಟಿಯಾಯಿತು. ಉತ್ತರೀಯವನ್ನು ಟೊಂಕಕ್ಕೆ ಬಿಗಿದೆ. "ರನ್ನ, ರನ್ನ" ಎಂದೆ. "ನಾಣು" ಎಂದು ಕಮರಿಯೊಳಗಿನಿಂದ ಉತ್ತರ ಬಂತು. "ಇದೋ, ಬಂದೆ" ಎಂದವನೆ ಕಮರಿಯ ಬಾಯಲ್ಲಿ ಬೆಳೆದಿದ್ದ ಗಿಡವನ್ನು ಹಿಡಿದುಕೊಂಡು ಕೆಳಗೆ ಕಾಲಿಳಿಬಿಟ್ಟೆ. ಕಾಲಿಗೆ ನೆರವು ಸಿಕ್ಕಿತು. ನಾನಿಳಿದ ಕಡೆ ಕತ್ತಲು. ದೊಡ್ಡ ಬಂಡೆಯೊಂದರ ನೆರಳು ಕಮರಿಯ ಈ ಅರ್ಧ ಬಾಯನ್ನು ಮುಚ್ಚಿತ್ತು. ಸ್ವಲ್ಪ ಹೊತ್ತಿಗೆ ಕಣ್ಣಿಗೆ ಕತ್ತಲೆ ಅಭ್ಯಾಸವಾಗಿ ಸ್ವಲ್ಪ ಕಾಣಿಸಹತ್ತಿತು. ಕಮರಿಯ ಗೋಡೆ ಕಚ್ಚು ಕಚ್ಚಾಗಿ ಹೆಜ್ಜೆಯಿಡುವಂತೆ ಇತ್ತು. ಗಿಡದ ಬುಡ ಕಮರಿಯ ಗೋಡೆಯಂಚಿನಲ್ಲಿ ಸ್ವಲ್ಪದೂರ ಕೆಳಗಡೆ ಹೋಗಿತ್ತು. ಅದರ ಅವಲಂಬನ ದಿಂದ ಕಮರಿಯ ಅಂಚಿನ ಗೋಡೆಯ ಮೇಲೆ ನಿಧಾನವಾಗಿ ಇಳಿಯ ಹತ್ತಿದೆ. ಬುಡ ಮುಗಿಯುವ ಹೊತ್ತಿಗೆ ಹತ್ತು ಅಡಿ ಕೆಳಗೆ ಬಂದಿದ್ದೆ. ಮುಂದೆ ಹೇಗೆ ಇಳಿಯುವುದೆಂದು ಚಿಂತಿಸಿ ಸ್ವಲ್ಪ ನಿಂತುಕೊಂಡು ಆ ಕಡೆ ಅಂಚನ್ನು ನೋಡಿದೆ. ಹತ್ತು ಹದಿನೈದು ಅಡಿಗಳ ಕೆಳಗೆ ಐದಾರು ಅಡಿ ಚದರದ ಒಂದು ಬಂಡೆ ಆ ಗೋಡೆಯಿಂದ ಮುಂದಕ್ಕೆ ನಾನಿಳಿಯು ತ್ತಿದ್ದ ಕಡೆಗೆ ಚಾಚಿದ್ದಂತೆ ಕಂಡಿತು. ಆ ಬಂಡೆಯ ಮೇಲೆ ರತ್ನ

ಕುಳಿತಿದ್ದ ಹಾಗೂ ತೋರಿತು. ಅವಳಿರುವೆಡೆಯನ್ನು ನಾನು ಸೇರಬೇಕಾದರೆ ನಾನಿಳಿಯುತ್ತಿರುವ ಗೋಡೆಯಿಂದ ಹದಿನೈದು ಅಡಿಗಳ ಕೆಳಕ್ಕೆ ಅವಳಿರುವ ಬಂಡೆಗೆ ಚಿಗಿಯಬೇಕು. ಕಷ್ಟಸಾಧ್ಯವಾದ ಕೆಲಸ. ನೆಗೆಯುವಾಗ ಸ್ವಲ್ಪ ಓಸರ ತಪ್ಪಿದರೆ ಪ್ರಪಾತಕ್ಕೆ ಬೀಳಬೇಕು. ಬಂಡೆ ಚಿಕ್ಕದು. ರತ್ನಳ ಮೇಲೆಯೇ ಬಿದ್ದು ಬಿಟ್ಟರೋ? ಆದರೂ ಅವಳೆಡೆಯನ್ನು ಸೇರಬೇಕಾದರೆ ಒಂದೇ ಒಂದು ಮಾರ್ಗ. ನಾನು ನೆಗೆದೇ ತೀರಬೇಕು. ಧೈರ್ಯಮಾಡಿದೆ. ದೇವರ ಮೇಲೆ ಭಾರ ಹಾಕಿದೆ, ಕಮರಿಯ ಗೋಡೆಗೆ ಬೆನ್ನು ಮಾಡಿ ಕೈ ಮುಂದಕ್ಕೆ ಚಾಚಿದೆ.

"ಬೇಡ, ನಾಣು, ದಮ್ಮಯ್ಯ, ಬೇಡಪ್ಪ" ಎಂದು ಕಮರಿಯ ಕತ್ತಲೆ ಚೀರಿತು. "ರತ್ನಾ, ಹುಡುಗಿ, ಹೆದರಿದೆನೆಂದುಕೊಂಡೆಯಾ" ಎಂದು ಚಿಗಿದೇ ಬಿಟ್ಟೆ.

"ನಾಣು, ಏನು ಸಾಹಸ ಮಾಡಿದೆಯಪ್ಪ, ನಾಣು"

ನನ್ನ ತಲೆ ರತ್ನಳ ತೊಡೆಯ ಮೇಲಿತ್ತು. ತೊಯ್ದ ತುಂಬುಗಣ್ಣುಗಳೆರಡು ನನ್ನನ್ನು ದೃಷ್ಟಿಸಿ ನೋಡುತ್ತಿದ್ದುವು. ಆಗತಾನೆ ಚಂದ್ರಿಕೆ ಕಮರಿಯ ಗೋಡೆಯ ಅಂಚಿನಿಂದ ಮೆಲ್ಲನೆ ಸರಿದು ಅವಳ ಎಡಭುಜದ ಮೇಲೂ ಬಿದ್ದಿತ್ತು. ಎಂತಹ ಚಿತ್ರ! ಎಂತಹ ಸನ್ನಿವೇಶ! ಮೇಘವರ್ಣದ ಸೀರೆಯುಟ್ಟು ಗುಲಾಬಿ ರಂಗಿನ ಕುಪ್ಪುಸವನ್ನು ರತ್ನ ತೊಟ್ಟಿದ್ದಳು. ಕುರುಳುಗಳು ಕುಣಿದು ಸ್ವಚ್ಛಂದವಾಗಿ ಕಣ್ಣು ಕಪೋಲಗಳನ್ನು ಮುತ್ತಿಡುತ್ತಿದ್ದವು. ಕಣ್ಣುಗಳು ಮುಕ್ತಾಂಜಲಿಯನ್ನು ನನ್ನ ಮುಖದ ಮೇಲೆ ಸುರಿಸುತ್ತಿದ್ದವು. ಮುಖವು ಚೆನ್ನಾಗಿ ಕಾಣಿಸುತ್ತಿರಲಿಲ್ಲ. "ರನ್ನ, ಮಗು," ಎಂದೆ.

"ನಾಣು!"

"ನಾಣು!"

ಕಣ್ಣು ಬಿಟ್ಟೆ. ಹೊತ್ತು ಹುಟ್ಟಿ ಬಿಸಿಲೇರಿತ್ತು.

ಎದ್ದು ಬಾಗಿಲು ತೆರೆದೆ. ರತ್ನ ನಿಂತಿದ್ದಳು. ಅದೇ ಕುಪ್ಪಸ, ಅದೇ ಸೀರೆ, ಅದೇ ಅಸ್ತವ್ಯಸ್ತವಾದ ಕುರುಳೋಳಿ, ಅದೇ ತುಂಬುಗಣ್ಣು – ಕಮರಿಯಲ್ಲಿ ಕಾತರಗೊಂಡ ಕಣ್ಣು. "ರನ್ನ" ಎಂದೆ. ನನಗೇ ಆಶ್ಚರ್ಯವಾಯಿತು.

ಹೀಗೆ ಹೆಸರು ಹಿಡಿದು ಕೂಗುವಷ್ಟು ಧೈರ್ಯ ನನಗೆ ಯಾವಾಗಲೂ ಬಂದಿರಲಿಲ್ಲ. ಬಹಳ ನಾಚಿಕೆಯಾಯಿತು.

"ಒಳಕ್ಕೆ ಬಾಮ್ಮ." ಎಂದೆ.

"ಬರೋ ಹಾಗಿಲ್ಲಪ್ಪ, ಹೋಗಬೇಕು. ನಿನ್ನ, ಅಣ್ಣಯ್ಯ ಕಾಫಿಗೆ ಕರೆದುಕೊಂಡು ಬಾ ಎಂದು ಹೇಳಿ ಕಳುಹಿಸಿದ. ಬರುತ್ತೀಯಾ?"

"ಬಾ, ರನ್ನ, ಒಳಕ್ಕೆ, ಕಾಫಿಗೆ ಸ್ವಲ್ಪ ತಡವಾದರೆ ಆಗಲಿ. ಇದೇನು ಸಪ್ಪಗಿದ್ದೀಯಾ?"

ರತ್ನ ಒಳಕ್ಕೆ ಬಂದಳು. ಒಂದು ಗಳಿಗೆ ಯಾರೂ ಏನೂ ಮಾತಾಡಲಿಲ್ಲ. ನನಗೆ ಇನ್ನೂ ಕನಸು ಹರಿದಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ರತ್ನ, "ನಾಣಿ, ನನಗೆ ಮದುವೆ" ಎಂದು ಮೆಲ್ಲನೆ ನುಡಿದಳು. ನುಡಿಯಲ್ಲಿ ನರಕವಿದ್ದಂತೆ ತೋರಿತು. ನನ್ನದೆಗೆ ಮಹಾಭಯವೊಂದು ಹೊಕ್ಕು ನಾನು ತಲ್ಲಣಿಸಿದೆ. ಆದರೂ ಮನೋವಿಕಾರವನ್ನು ಹೊರಗೆಡಹದೆ ನಕ್ಕು, "ನಿನಗೆ ಮದುವೆಯಾದರೆ ನನಗೂ ಮದುವೆ" ಎಂದೆ. "ಮದುವೆಗೆ ಬಾರದಿರಬೇಡಪ್ಪ!" ಎಂದಳು. "ನಾನಿಲ್ಲದೆ ಮದುವೆಯುಂಟೆ?" ಎಂದೆ. "ನಿನಗೆ ಗೊತ್ತಿಲ್ಲ. ಗೊತ್ತಿದ್ದರೆ ಹೀಗೆ ಹುಡುಗಾಟ ಮಾಡುತ್ತಿದ್ದೆಯಾ" ಎಂದವಳು ಕಿರುಮನೆಯ ಬಾಗಿಲನ್ನೆಳೆದುಕೊಂಡು ಸರ್ರನೆ ಹೊರಕ್ಕೆ ಹೊರಟುಹೋದಳು. ನಾನು ಅಪ್ರತಿಭನಾದೆ. "ರನ್ನ" ಎಂದು ಹೇಳುವಷ್ಟರಲ್ಲಿ ಅವಳ ಮೇಘವರ್ಣದ ಸೀರೆಯ ಸೆರಗಿನ ಕೊನೆಯ ಜರಿಯಂಚು ಕದದ ಸಂದಿಯಲ್ಲಿ ಮಾಯವಾಯಿತು.

* * *

ಆದರೆ ಇದೆಲ್ಲಾ ಆರು ವರುಷಗಳ ಹಿಂದಿನ ಮಾತು.

# ಕೃಷ್ಣಶಾಸ್ತ್ರಿಯ ತ್ಯಾಗ

ಮೊದಲೇ ಮಾಗಿಯ ಕಾಲ. ಅದರ ಜೊತೆಗೆ ಮೋಡ ಬೇರೆ ಮುಸುಕಿ ಸೋನೆ ಹಿಡಿದಿದ್ದರೆ ಆ ದುರ್ದಿನದ ಮುಜಗರವನ್ನೂ ಕೊರೆತವನ್ನೂ ಕೇಳ ಬೇಕೆ? ತರುಣನಾದ ಕೃಷ್ಣಶಾಸ್ತ್ರಿಗೂ ಒಲೆಯ ಮುಂದೆ ಕುಳಿತುಕೊಳ್ಳಬೇಕು ಎನ್ನಿಸಿತು. ಒಲೆಯಲ್ಲಿ ಕೆಂಡವಿನ್ನೂ ಇತ್ತು. ಅವನ ತಾಯಿ ದೇವಸ್ಥಾನಕ್ಕೆ ಹೋಗಿದ್ದರು. ಹುಡುಗರು ಶಾಲೆಯಿಂದ ಇನ್ನೂ ಮನೆಗೆ ತಿಂಡಿಗೆ ಬಂದಿರ ಲಿಲ್ಲ. ಮನೆಯಲ್ಲಿ ಆತನೊಬ್ಬನೆ. ಒಲೆಯ ಮುಂದೆ ಕುಳಿತುದರಿಂದ ಚಳಿಯೋಡಿ ನಡುಕ ನಿಂತು ಮೈಯಲ್ಲಿ ಶಾಖ ಹುಟ್ಟಿದಾಗ ಅವನಿಗುಂಟಾದ ಸುಖವನ್ನು ಹೇಳತೀರದು. ಇಂತಹ ನೆಮ್ಮದಿಯನ್ನೂ ಸೌಖ್ಯವನ್ನೂ ಅವನು ಹಿಂದೆ ಎಂದೂ ಅನುಭವಿಸಿರಲಿಲ್ಲ.

ಮನೆಯ ಮೌನವೋ, ಸೂರಿನ ಮೇಲೆ ಅವಿರತವಾಗಿ ಬೀಳುವ ಸೋನೆಯ ಶ್ರುತಿಯೋ, ಒಲೆಯ ಮುಂದೆ ಕುಳಿತುಕೊಂಡುದರಿಂದ ಉಂಟಾದ ನೆಮ್ಮದಿಯ ಅನುಭವವೋ, ಅಥವಾ ಎಲ್ಲವೂ ಒಟ್ಟಿಗೆ ಕಲೆತೋ, ಅಂತೂ ಅಂದು ಕೃಷ್ಣಶಾಸ್ತ್ರಿಯ ಮನಸ್ಸಿನಲ್ಲಿ ಮದುವೆಯ ಯೋಚನೆ ಯನ್ನು ಹುಟ್ಟಿಸಿದುವು.

"ಈಗ ನನಗೆ ಒಬ್ಬಳು ಹೆಂಡತಿಯಿದ್ದು, ವೀಣೆಯನ್ನೋ ಪಿಟೀಲನ್ನೋ ಬಾರಿಸುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಬ್ರಹ್ಮಚಾರಿಯ ಬಾಳು ಹೇಳಪ್ಪ—ಮರುಳುಕಾಡು—ನೆಳಲಿಲ್ಲ, ನೀರಿಲ್ಲ; ಮದುವೆ ಮಾಡಿಕೊಳ್ಳ ಬೇಕಪ್ಪ."

* * *

"ವೇಣಿ ಸಿಕ್ಕಿದ್ದರೆ ಚೆನ್ನಾಗಿತ್ತು. ಆ ಪುಣ್ಯ ನನಗೆಲ್ಲಿ ಬರಬೇಕು? ಹೋಗಲಿ ಬಿಡು—". ಕೃಷ್ಣಶಾಸ್ತ್ರಿಯ ನಿಟ್ಟುಸಿರು ಒಂದು ದಪ್ಪ ಕೆಂಡದ ಬೂದಿಯನ್ನುರುಹಿ ಅದನ್ನು ಒಂದು ಕ್ಷಣ ಕಾಲ ಉಜ್ವಲವನ್ನಾಗಿ ಮಾಡಿತು.

* * *

"ವೇಣಿ ಸಿಕ್ಕಿದ್ದರೆ ಚೆನ್ನಾಗಿರುತ್ತಿತ್ತು. ಹೋಗಲಿ ಬಿಡು, ಅವಳ ಚಿಂತೆ ನನಗೇಕೆ? ಈಗ ಅವಳು ಇಲ್ಲಿ ಇದ್ದಿದ್ದರೆ ಬ್ಯಾಂಕಿನಲ್ಲಿ ಸಾವಿರ ರೂಪಾಯಿ ಇರುತ್ತಿತ್ತೇನು? ಅಕ್ಕಸಾಲೆಯ ಪೆಟ್ಟಿಗೆಯನ್ನು ಸೇರುತ್ತಿತ್ತು . . . ಅಯ್ಯೋ ನನ್ನ ಹಣವೇ—ನನ್ನ ಈ ಹಣ ಹೆಣದ ಸಿಂಗಾರದ ಹಾಗೆ—ಹೋಗಲಿ ಬಿಡು."

* * *

"ಅನಂತ, ವೇಣಿಯನ್ನು ಎಷ್ಟು ಸುಲಭವಾಗಿ ಹೊಡೆದುಬಿಟ್ಟ ನಯ್ಯಾ. ಯೋಗ್ಯನೇನೋ ಹೌದು. ವಿದ್ಯಾವಂತ ನಿಗರ್ವಿ, ಆದರೆ ಸುಲಭ ವಾಗಿ ಹೊಡೆದುಬಿಟ್ಟ. ಅವಳ ಮನೆಯವರು ನಮ್ಮನ್ನು ಕೇಳುವುದಕ್ಕೆ ಬಂದಾಗ ಅಪ್ಪ ಏನೋ ಘೋರಣೆ ಮಾಡಿಬಿಟ್ಟರು. ಏನೋ ಕೊಳ್ಳೆ ಹೋಗುವ ದೊಡ್ಡಸ್ತಿಕೆ. ನಾನಾದರೂ ನನ್ನಾಸೆಯನ್ನು ಬಿಚ್ಚಿ ಹೇಳಿದೆನೆ? ನನ್ನ ಸಂಕೋಚಕ್ಕೆ ಬೆಂಕಿ ಹಾಕಿದರು. ಈಗ ಅನುಭವಿಸುವವರಾರು? ನಾನೋ, ಸ್ವರ್ಗದಲ್ಲೋಲಾಡುವ ಅವರೋ? ಏನು ಜಂಭವಪ್ಪ ನಮ್ಮ ಮನೆತನದವರಿಗೆ. ಹೋಗಲಿ ಬಿಡು ಹುಸ್ . . ."

* * *

"ವೇಣಿಯಿಲ್ಲದಿದ್ದರೆ ಹೋಗಲಿ. ಪ್ರಪಂಚದಲ್ಲಿ ಬೇರೆ ಹುಡುಗಿಯರೇ ಇಲ್ಲವೆ? ನನಗೆ ಯಾರೂ ಹೆಣ್ಣು ಕೊಡರೆ? ಹೆಣ್ಣು ಕೊಡದಿರುವುದಕ್ಕೆ ನಾನೇನು ಕುರೂಪಿಯೆ? ದರಿದ್ರನೆ? ರೋಗಿಷ್ಠನೆ? ಹೆಂಗಳನ್ನು ಆರಿಸಿ ಮದುವೆ ಮಾಡಿಕೊಳ್ಳುವ ಹಕ್ಕನ್ನು ಸಮಾಜ ನನಗೆ ಕೊಟ್ಟಿರುವಾಗಲೂ ನಾನು ಹೀಗೆ ನರಳಬೇಕಾಗಿದೆಯಲ್ಲಾ. ಮದುವೆ ಮಾಡಿಕೊಳ್ಳಬೇಕಪ್ಪಾ. ಹೀಗೆ ಬ್ರಹ್ಮಚರ್ಯಾಶ್ರಮದಲ್ಲಿ ಹಿತವಿಲ್ಲ—ಖಂಡಿತವಾಗಿಯೂ ಹಿತವಿಲ್ಲ.

"ನನ್ನದೇನಯ್ಯ ದುರದೃಷ್ಟ, ೩೫ ವರುಷಗಳಾದರೂ ಮದುವೆಯಿಲ್ಲ. ನನ್ನ ಸ್ನೇಹಿತರುಗಳಿಗೆಲ್ಲಾ ಮದುವೆಯಾಗಿ ಎರಡು ಮೂರು ಮಕ್ಕಳು ಸಹ ಕೆಲವರಿಗಿವೆ. ಇನ್ನೂ ಕೆಲವರಿಗೆ ಎರಡನೆ—ಹೋಗಲಿ—ಮೂರನೆಯ ಮದುವೆ ಸಹ ಆಗಿ ಹೋಗಿದೆ. ನನ್ನದೇನಯ್ಯ ಗ್ರಹಚಾರ. ನೋಡು

ರಾಮು, ವಾಸು ಇವರ ಎರಡನೆಯ ಮದುವೆ ಊಟಕ್ಕೆ ಮೊನ್ನೆ ತಾನೆ ಹೋಗಿದ್ದೆನಲ್ಲಾ."

* * *

"ಏನನ್ಯಾಯವಪ್ಪ ಇದು. ಬಾಲವಿಧವೆಯರನ್ನು ಹಾಗಿಟ್ಟು, ಎರಡು ಮೂರು ಸಲ ಮದುವೆ ಮಾಡಿಕೊಳ್ಳುವುದು. ರಾಮ ರಾಮ! ಬಾಲ ವಿಧವೆ! ಅಬ್ಬ, ಅವರ ಸ್ಥಿತಿಯನ್ನು ನೆನೆದುಕೊಂಡರೆ ಮೈ ಜುಮ್ಮೆನ್ನುತ್ತದೆ. ಪುರುಷ ರೆಷ್ಟು ಸ್ವಾರ್ಥಪರಾಯಣರು! ಎಷ್ಟು ನಿರ್ಘೃಣಿಗಳು! ಅರಿಯದ ಹುಡುಗಿ ಯರ ಬಾಳು ಆಗತಾನೆ ಬಿರಿಯುವಾಗ ಹೊಸಕಿ ಬಿಡುವುದೆ? ಹೀಗೆ ಅವ ರನ್ನು ನಿಲ್ಲಿಸುವುದಕ್ಕಿಂತ ಪತಿಯೊಂದಿಗೆ ಚಿತೆಗೇರಿಸುವುದೇ ಉತ್ತಮ. ಇರಲಿ, ಇವರಿಗೆ ಬುದ್ಧಿ ಕಲಿಸುತ್ತೇನೆ. ಸಮಾಜ ನೆಟ್ಟಿರುವ ಮುಳ್ಳುಬೇಲಿ ಯನ್ನು ಕಿತ್ತು ಉನ್ನತಧ್ಯೇಯದ ಮಾರ್ಗವನ್ನು ನಿಷ್ಕಂಟಕವಾಗಿ ಮಾಡಿ ಬಿಡುತ್ತೇನೆ. ನಮ್ಮಂಥವರು ಮಾಡದಿದ್ದರೆ ಇನ್ನಾರು ಮಾಡುವರು? ನಾನು ವಿಧವೆಯನ್ನೇ ಮದುವೆಯಾಗುವುದು, ಖಂಡಿತ. ಶಪಥವನ್ನು ಮಾಡು ತ್ತೇನೆ. ಬಾಲವಿಧವೆಯನ್ನೇ—ಹುಂ—ಇನ್ನೂ ಒಂದು ಹೆಜ್ಜೆ ಮುಂದಿಡು ತ್ತೇನೆ. ವಿತಂತುವಿಗೆ ಒಂದು ಕೂಸಿದ್ದರೂ ಸರಿಯೆ."

* * *

"ಶಪಥವೇನೋ ಮಾಡಿಬಿಟ್ಟೆ. ಅದೇನೋ ಸರಿಯೆ. ನಮ್ಮಲ್ಲಾರಪ್ಪ ಬಾಲ ವಿತಂತುಗಳು? ನಾನು ಮದುವೆ ಮಾಡಿಕೊಳ್ಳುವಂಥವರು? ಪಾರ್ವತಿ- ಉಹು. ತುಂಗೆ–ಅಶ್ಶಿ. ಕಮಲೆ–ಕಮಲೆ–ಹೆಸರು ಮುದ್ದಾಗಿದೆ. ನೈದಿಲೆ ಎಂದಿದ್ದರೆ ಅನ್ವರ್ಥವಾಗುತ್ತಿತ್ತು. ಹದಿನೆಂಟು ವರ್ಷ ವಯಸ್ಸು, ಮಕ್ಕ ಳಿಲ್ಲ. ಕೆಟ್ಟ ಹೆಸರನ್ನು ಬೇರೆ ಎತ್ತಿದ್ದಾಳೆ. ಆದೇನು ಅವಳ ತಪ್ಪೆ? ಆದರೂ . . . ಉಹು. ಮುಂದೆ ಲಲಿತಾ . . . ಮಧುರವಾದ ಹೆಸರು. ಲಿಲ್ಲೀ ಎಂದೂ ಕರೆಯಬಹುದು. ಸುಮಾರಾಗಿಯೂ ಇದ್ದಾಳೆ. ಒಂದು ಎಳೆಗೂಸಿದ್ದರೆ ಇದ್ದುಕೊಳ್ಳುತ್ತೆ. ಅದನ್ನು ದತ್ತು ತೆಗೆದುಕೊಂಡರೂ ಆಯಿತು. ವಯ ಸ್ಸೇನು, ಇನ್ನೂ ಹದಿನಾರು. ಪಾಪ, ಮದುವೆ ಮಾಡಿಕೊಳ್ಳಬಹುದು . . . ಈ ಹಾಳು ಸೋನೆ ಟಪ್, ಟಪ್, ಟಪ್, ಟಪ್ ಎಂದು ಏಕೆ ಹೊಡೆದು

ಕೊಳ್ಳುತ್ತೋ ಕಾಣೆ . . . ಮದುವೆ ಮಾಡಿಕೊಳ್ಳಬಹುದೆ ? . . . ಉ . . . ಹು....ಏಕೋ ಮನಸೊಪ್ಪಲಿಲ್ಲ. ನನ್ನ ಈ ತ್ಯಾಗಕ್ಕೆ ಅರ್ಹಳಲ್ಲ. ಸಮಾಜವನ್ನು ಧಿಕ್ಕರಿಸಿ, ಅದರ ಕೋಪವನ್ನು ಎದುರಿಸಿ, ಕೋಟಲೆಗಳನ್ನು ಅಲ್ಲಗಳೆಯುವಷ್ಟು ಪ್ರೇಮ ಆಕೆಯಲ್ಲಿ ನನಗಿದೆಯೆ ? . . . ಉ . . . ಹು . . . ಈ ತ್ಯಾಗಕ್ಕೆ ವೇಣಿಯೊಬ್ಬಳು ಅರ್ಹಳು. ಅವಳೊಬ್ಬಳೆ. ವೇಣಿ ವಿಧವೆಯಾಗಿದ್ದರೆ . . .

"ವೇಣಿ ! ಛೆ ! ಗಂಡಸಿದಾನಲ್ಲ ಆಕೆಗೆ ! ಅನಂತ ಗುಂಡಿನಂತಿದ್ದಾನೆ. ಇದೇನು ಹುಚ್ಚು ನನಗೆ ? ವೇಣಿಯಂತೆ ವೇಣಿ. ಏನು ಅಮಂಗಳವನ್ನು ನುಡಿದೆ ! ಮನುಷ್ಯನ ಮನಸ್ಸು ಎಷ್ಟು ಪಾಪಭೂಯಿಷ್ಠವಾದುದು . . . ! ವೇಣಿ ವಿಧವೆಯಾಗಬೇಕಂತೆ, ನಾನು ಮದುವೆಯಾಗಲೆಂದು . . . . ಅಹ್ಹಹ್ಹಾ . . .

"ಅವಳು ವಿತಂತುವಾಗಿದ್ದರೆ—ಅಂದುಕೊಳ್ಳೋಣ; ಅಂದುಕೊಳ್ಳುವುದರಲ್ಲೇನು ಬಾಧಕ ? ನಾವು ಹೇಳಿದ ಹಾಗೆ ಆಗಿಹೋಗುವುದಕ್ಕೆ ನಾವೇನು ಋಷಿಗಳೆ ? ಅಂದುಕೊಳ್ಳೋಣ. ಆಗ ಖಂಡಿತ ಒಂದು ಕ್ಷಣದಲ್ಲಿ ಮದುವೆಯಾಗಿಬಿಡುತ್ತೇನೆ. ಅವಳನ್ನೊಪ್ಪಿಸುವುದು, ಆರ್ಯಸಮಾಜಕ್ಕೆ ಅರ್ಜಿಯನ್ನು ಹಾಕುವುದು, ಅಷ್ಟೆ . . . ಉಫ್, ಉಫ್ ಒಲೆ ತಣ್ಣಗಾಯಿತೇನೋ ? ಉಫ್ . . .

"ನನಗೇನಯ್ಯಾ ಕೇಡು ಹೀಗೆ ಯೋಚಿಸುವುದಕ್ಕೆ ? ನನ್ನ ಬುದ್ಧಿ ಕೆಡುತ್ತಿದೆ. ಇಲ್ಲದೆ ಹೋದರೆ ಮೂರು ದಿನಗಳ ಹಿಂದೆ ಅನಂತನನ್ನು ಬೀದಿಯಲ್ಲಿ ಎಲ್ಲೋ ಕಂಡಾಗ ಅವನು ಹಾಗೆ ಕೆಮ್ಮುತ್ತಾ ಇದ್ದದ್ದು ಈಗೇಕೆ ಜ್ಞಾಪಕಕ್ಕೆ ಬರಬೇಕು ? ಪಾಪ, ಗೂರಲಿರಬಹುದು. ಇಲ್ಲ ನೆಗಡಿಯೋ. ಕೃಶನಾಗಿಯೂ ಇದ್ದ . . . ಅವನ ಯೋಚನೆ ನನಗೇಕೆ ? ಅವನಿಗೇನಾದರೆ ನನಗೇನು ? . . . ನನಗೇನೆ ? . . . ಅವನು ಸತ್ತರೂ . . . ವೇಣಿ ಸಿಕ್ಕುತ್ತಾಳೆಯೆ ? ಹುಚ್ಚು. ಆ ಗೊಡ್ಡು ವೈದಿಕ ಬ್ರಾಹ್ಮಣ, ಅದರಲ್ಲೂ ಬಡವ, ಅವಳ ತಂದೆ, ಮಗಳ ಪುನರ್ವಿವಾಹಕ್ಕೆ ಒಪ್ಪುತ್ತಾನೆಯೆ ? ಕೇಳಿದರೆ ಶಿರಚ್ಛೇದನ ಮಾಡಿಯಾನು. ಕೇಳುವುದು ತಾನೆ ಹೇಗೆ ? ವೇಣಿಗೆ ನನ್ನಲ್ಲಿ ಪ್ರೇಮವಿದೆಯೆಂಬುದು ತಾನೆ ನನಗೇನು ಗೊತ್ತು ? ಅಯ್ಯೋ ಶನಿಯೆ,

ನಿನಗ್ಯಾಕೋ ವೇಣಿಯ ಯೋಚನೆ, ಕೈಬಿಟ್ಟು ಹೋದವಳದು? ನಿನಗಿಂಥ ದುರ್ಬುದ್ಧಿ ಯಾಕೋ ಹುಟ್ಟಿತು? ಅಯ್ಯೋ, ಇವನು ಮದುವೆ ಮಾಡಿ ಕೊಂಡು ಸಮಾಜೋದ್ಧಾರ ಮಾಡುವುದಕ್ಕೆ ವೇಣಿ ವಿಧವೆಯಾಗಬೇಕಂತೆ . . . ಹುಸ್ . . ."

* * *

"ಅನಂತನಿಗೆ ಕೆಲಸ ಹೋಯಿತೆಂದು ರಾಮು ಹೇಳಿದ್ದು ಜ್ಞಾಪಕ. ಅಯ್ಯೋ ಪಾಪ, ಅವನ ದುರದೃಷ್ಟಕ್ಕೆ ಅವನು ಲೆಕ್ಕ ಬರೆಯುತ್ತಿದ್ದ ಅಂಗಡಿಯೂ ದಿವಾಳಿಯಾಗಬೇಕೆ? ಈಗ ಕೆಲಸ ಸಿಕ್ಕಿದೆಯೋ ಇಲ್ಲವೋ ಕಾಣೆ. ಬಹಳ ಕಷ್ಟಪಡುತ್ತಿರಬೇಕು. ಅವನ ಕೈಹಿಡಿದು ವೇಣಿಗೆ ಸುಖ ವಿಲ್ಲ. ರಾಣಿಯಂಥವಳು. ಹೋಗಲಿ, ಅವಳ ಯೋಚನೆ ನನಗೇಕೆ? ಸೋನೆ ನಿಂತಿತಲ್ಲಪ್ಪಾ ಸದ್ಯ; ಅಮ್ಮ ಬರುವ ಹೊತ್ತಾಯಿತು. ಉಫ್, ಉಫ್, ಒಲೆ ತಣ್ಣಗಾಯಿತು. ರಾಮು ಆಗಲೇ ಬರುತ್ತೇನೆಂದು ಹೇಳಿದ್ದ; ಇನ್ನೂ ಏಕೆ ಬರಲಿಲ್ಲವೋ ಕಾಣೆ. ಬಂದರೆ ವಿಚಾರಿಸಬಹುದು.

ಅಯ್ಯೋ, ಇದೇನು? ಈ ಕೆಟ್ಟ ಯೋಚನೆ, ನೊಣದ ಹಾಗೆ ಎಷ್ಟು ಓಡಿಸಿದರೂ ಏಕೆ ತಿರುಗಿ ಸುಳಿಯುತ್ತೆಯೊ ಕಾಣೆ. ವೇಣಿ—ವೇಣಿ— ಅನಂತ—ವಿಧವೆ—ಮದುವೆ! ಅಯ್ಯೋ, ಹುಚ್ಚ; ಅಯ್ಯೋ ಪಾಪಿ . . ."

ಕೃಷ್ಣಶಾಸ್ತ್ರಿಯ ನಿಟ್ಟುಸಿರು ಒಲೆಯ ಬೂದಿಯನ್ನೆಬ್ಬಿಸಿ ಆತನ ಮುಖದ ಮೇಲೆ ಚೆಲ್ಲಿತು.

(೨)

"ಯಾರೊಳಗೆ? ಕಿಟ್ಟೊ!"

"ರಾಮು, ಆದ್ಯಾಕೊ ಇಷ್ಟು ತಡಮಾಡಿಬಿಟ್ಟೆ. ಬಾ ಒಳಕ್ಕೆ, ಕೂತುಕೋ"

"ಕೂರುವುದಕ್ಕಾಗುವುದಿಲ್ಲವಯ್ಯಾ. ಪೇಟೆಗೆ ಬರುತ್ತೀಯಾ? ಸ್ವಲ್ಪ ಸಾಮಾನು ತರಬೇಕು. ಹಾಗೆಯೇ ಅನಂತನ ಮನೆಗೂ ಹೋಗಬೇಕು. ಕಂಡು ಎಷ್ಟೋ ದಿನವಾಯಿತು. ನೀನೂ ಬಾರಯ್ಯ, ಹೋಗಿ ಬರೋಣ."

ರಾಮರಾಯನು ಆದಿನ ತನ್ನನ್ನು ಅನಂತರಾಯನ ಮನೆಗೆ ಕರೆದಾಗ

ಕೃಷ್ಣಶಾಸ್ತ್ರಿಯ ಎದೆ ಹರ್ಷ ಭಯಗಳಿಂದ ಕಂಪಿಸಲಾರಂಭಿಸಿತು. ಮೊದಲು ಏನೋ ಯೋಚನೆಯಿಂದ "ಒಲ್ಲೆ" ಎನ್ನುವುದರಲ್ಲಿದ್ದವನು ಆಮೇಲೆ "ಬರುತ್ತೇನಯ್ಯಾ, ಸ್ವಲ್ಪ ತಾಳು, ದಣುವಾರಿಸಿಕೋ; ಕಾಫಿ ಮಾಡಿಕೊಡು ತ್ತೇನೆ. ಕುಡಿದುಬಿಟ್ಟು ಹೋಗೋಣ. ಸಾಯಂಕಾಲವಾಗುತ್ತಾ ಬಂತು. ಹೋಟೆಲಿಗೆ ಹೋಗಿ ಕುಡಿಯುವುದೇನು? . . . ಅನಂತನಿಗೆ ಕೆಲಸ ಸಿಕ್ಕಿತೇನಯ್ಯ?" ಎಂದನು.

ರಾಮು : ಕೆಲಸವೂ ಇಲ್ಲ, ಗಿಲಸವೂ ಇಲ್ಲ. ಈ ಕಾಲದಲ್ಲಿ ಬಯಸಿ ದವರಿಗೆಲ್ಲಾ ಕೆಲಸ ಸಿಕ್ಕಿಬಿಟ್ಟರೆ ಕೇಳುವುದೇನು? ಅಥವಾ ಸಿಕ್ಕಿದೆಯೋ, ಯಾರಿಗೆ ಗೊತ್ತು. ಅವನನ್ನು ನೋಡಿ ಹತ್ತು ದಿನಗಳ ಮೇಲಾಯಿತು. ಈಗ ಹೋಗುತ್ತೇವಲ್ಲಾ, ಎಲ್ಲಾ ವಿಚಾರಿಸೋಣವಂತೆ.

ಕೃಷ್ಣ : ಪ್ರಾಣ ಸ್ನೇಹಿತನಂತೆ—ಸೋದರ ಮಾವನ ಮಗ ಬೇರೆ. ಕೆಲಸ ಸಿಕ್ಕಿದೆಯೋ ಇಲ್ಲವೋ ಕಾಣನಂತೆ. ಹೀಗೆ ಹೇಳುವುದಕ್ಕೂ ನಾಚಿಕೆ ಯಾಗುವುದಿಲ್ಲವೆ? ನಮ್ಮಿಬ್ಬರಿಗೂ ಇಷ್ಟು ಸ್ನೇಹ ಸಂಬಂಧಗಳಿದ್ದಿದ್ದರೆ ....

ರಾಮು : ಇದ್ದಿದ್ದರೆ—ನನ್ನಷ್ಟು ತಾಪತ್ರಯ ನಿನಗೂ ಇದ್ದಿದ್ದರೆ? ಬಾಯಲ್ಲಿ ಹೇಳುವುದಕ್ಕೇನು? ನೀನು ರಾಜ, ನಮ್ಮ ಕಷ್ಟ ನಿನಗೇನಯ್ಯಾ ಗೊತ್ತಾಗುತ್ತೆ? ಹೇಳಿಕೊಂಡರೆ ಫಲವಿಲ್ಲ. ಏಳಯ್ಯ ಹೊರಡೋಣ, ನಿನ್ನ ಕಾಫಿಯೂ ಬೇಡ, ಗೀಫಿಯೂ ಬೇಡ. ನೀನು ಕಾಫಿ ಮಾಡಿಕೊಡುವ ಹೊತ್ತಿಗೆ ಯುಗ ಮರಳುತ್ತೆ."

"ಹುಂ, ನಡಿಯಪ್ಪಾ" ಎಂದು ಕೃಷ್ಣಶಾಸ್ತ್ರಿ ಹೊರಡಲನುವಾದನು.

ಬಸವನಗುಡಿಯಲ್ಲಿ ಅನಂತರಾಯನ ಮನೆ. ಅಲ್ಲಿಗೆ ಮೊದಲು ಹೋಗಿ, ಬರುತ್ತಾ ಪೇಟೆಯ ಮೇಲೆ ಮಲ್ಲೇಶ್ವರಕ್ಕೆ ಹಿಂತಿರುಗಬೇಕೆಂದು ಕೃಷ್ಣ ಶಾಸ್ತ್ರಿಯೂ ರಾಮರಾಯನೂ ಬೈಸ್ಕಲ್ಲಿನ ಮೇಲೆ ಹೊರಟು ಸ್ವಲ್ಪ ಹೊತ್ತಿ ನಲ್ಲಿಯೇ ಅನಂತನ ಮನೆಯನ್ನು ಸೇರಿದರು. ಬಾಗಿಲು ಹಾಕಿತ್ತು. ರಾಮ ರಾಯನು ಬಾಗಿಲನ್ನು ತಟ್ಟಿದನು. ಸ್ವಲ್ಪ ಹೊತ್ತಿನ ಮೇಲೆ ಒಳಗಡೆ ಬಳೆಗಳ ಧ್ವನಿಯಾಗಲು ಕೃಷ್ಣಶಾಸ್ತ್ರಿಯ ಮೈ ಜುಮ್ಮೆಂದಿತು. ಬಾಗಿಲನ್ನು ತೆರೆ ದವಳು ವೇಣಿ!

ಎರಡು ವರ್ಷಗಳಿಂದೀಚೆಗೆ ಆಕೆಯ ರೂಪು ಎಷ್ಟು ಮನೋಹರ

ವಾಗಿ ಮಾರ್ಪುಗೊಂಡಿದೆ! ಆಗ ಅವಳು ಇನ್ನೂ ಹುಡುಗಿ. ಆ ವಯಸ್ಸಿನಲ್ಲಿ ಸೌಂದರ್ಯ ಸಂಕುಚಿತವಾಗಿ ಕಂಗಳೆರಡರಲ್ಲಿ ಮಾತ್ರ ಹೊಮ್ಮಿತ್ತು. ನಿರ್ಭೀತಿ, ಸ್ವಾತಂತ್ರ್ಯ, ಸರಳತೆ, ದೇವತ್ವ ಇವುಗಳನ್ನು ನಡೆ, ನುಡಿ, ಉಡುಪು, ಮುಗ್ಧ ನಯನಗಳು ಇವುಗಳು ಪ್ರತಿಬಿಂಬಿಸುತ್ತಿದ್ದುವು. ಈಗಿನ ವೇಣಿ ಬೇರೆ. ಸರ್ವಾಂಗಗಳಲ್ಲಿಯೂ ಸೌಂದರ್ಯ ಹೊರಹೊಮ್ಮಿದೆ. ಜವ್ವನದ ಬಿಂಕವಿದೆ. ಅಗಲವಾದ ಆ ಕಂಗಳಲ್ಲಿ ಚಾಂಚಲ್ಯವೀಗಿಲ್ಲ, ಅನೇಕ ಭಾವಗಳಿಗಾಕರವಾದ ಆಳವಾದ ಹೃದವನ್ನು ಅವು ಈಗ ಹೋಲಿವೆ. ಮನ ಮೋಹನವಾದ ರೂಪವದು. ವೇಣಿ ಆಭರಣರಹಿತಳಾಗಿದ್ದರೆ ಏನು? ನೂಲಂಚಿನ ಸೀರೆಯುಟ್ಟಿದ್ದರೇನು? ಆಕೆಯದು ಕಣ್ಣು ಸೆಳೆಯುವ ರೂಪು. ಕೃಷ್ಣನು ಆ ರೂಪವನ್ನು ಒಮ್ಮೆ ನೋಡಿ ಮತ್ತೊಮ್ಮೆ ನೋಡಲಾರದಾದನು. ಅವನಿಗೆ ಆ ದಿನದ ಹಗಲಕನಸು ಜ್ಞಾಪಕಕ್ಕೆ ಬಂದು ಅವನ ಮೈ ನಡುಗಿತು.

ಕೃಷ್ಣಶಾಸ್ತ್ರಿಯನ್ನು ಕಂಡು ವೇಣಿ ಥಟ್ಟನೆ ಒಳಕ್ಕೆ ಸರಿಯಲು ಅವನಿಗೆ ಮಿಂಚೊಂದು ಹೊಳೆದು ಅಳಿದ ಅನುಭವವಾಯಿತು. ಅವಳು, "ಅನಂತನೆಲ್ಲಿ?" ಎಂದು ಕೇಳಿದುದಕ್ಕೆ ರಾಮರಾಯನಿಗೆ ಮರೆಯಿಂದಲೇ "ಅವರಿಗೆ ಸ್ವಸ್ಥವಿಲ್ಲ, ಮಲಗಿದ್ದಾರೆ" ಎಂದು ಮೆಲ್ಲಗೆ ಉತ್ತರವಿತ್ತಳು.

"ಮಲಗಿದಾನೆಯೆ? ಸ್ವಸ್ಥವಿಲ್ಲವೆ? ಎಂದಿನಿಂದ? ಅನಂತ!.... ಜ್ವರವೇರಿದೆ."

ರಾಮರಾಯನು ಮುಟ್ಟುತ್ತಲು ಅನಂತನಿಗೆ ಎಚ್ಚರವಾಯಿತು. ಅವನು ಕಣ್ಣುಬಿಟ್ಟು ಕ್ಷೀಣಸ್ವರದಿಂದ "ಯಾರು, ರಾಮುವೆ, ಬಂದೆಯಾ. ಓಹೋ, ಕೃಷ್ಣಶಾಸ್ತ್ರಿಯೂ ಬಂದಿದ್ದಾನೆ. ಬಹಳ ಅಪರೂಪವಯ್ಯಾ, ಏಳ ಲಾರೆ, ಕ್ಷಮಿಸು. ಕುಳಿತುಕೊಳ್ಳಿ, ವೇಣಿ! ಕಾಫಿ ಮಾಡಿಕೊಡುತ್ತೀಯಾ, ....ಉಸ್, ಬಹಳ ತಾಪವಯ್ಯ" ಎಂದನು.

ರಾಮು: ಇದೇಕಯ್ಯಾ ಮಲಗಿಬಿಟ್ಟೆ? ಬಹಳ ಜ್ವರ ಬಂದಿದೆ. ಎಂದಿನಿಂದ ಖಾಯಿಲೆ? ನನಗೆ ಹೇಳಿಕಳುಹಿಸಬಾರದಾಗಿತ್ತೆ?

ಅನಂತ: ಇಂದೇಪ್ಪ ಜ್ವರ ಬಂದದ್ದು. ಮಧ್ಯಾಹ್ನ ಸ್ವಲ್ಪ ತಲೆ ನೋಯುತ್ತಿತ್ತು. ಹನ್ನೆರಡು ಗಂಟೆ ಇರಬಹುದು. ಕಾಫಿ ಕುಡಿಯೋಣ

ವೆಂದು ಹೋಟೆಲಿಗೆ ಹೋಗಿ ಸ್ವಲ್ಪ ಕಾಫಿ ಕುಡಿದು ಹೊರಗೆ ಬಂದೆ. ಹೊರಕ್ಕೆ ಬಂದ ಕ್ಷಣ ಎಲ್ಲಾ ವಾಂತಿಯಾಯಿತು. ತಲೆ ತಿರುಗಿ ಜ್ಞಾನ ತಪ್ಪುವಂತಾಯಿತು. ಜಟಕಾ ಮಾಡಿಕೊಂಡು ಹೇಗೋ ಮನೆಗೆ ಬಂದೆ. ಜ್ಞಾನವಿಲ್ಲದೆ ಮಲಗಿದೇನಪ್ಪ.

ಈ ಸಂಭಾಷಣೆ ನಡೆಯುವ ಅಂತರದಲ್ಲಿ ಕೃಷ್ಣನ ಎದೆಗೆ ಆವುದೋ ಒಂದು ಮಹಾಭಯ ಹೊಕ್ಕು, ಅವನನ್ನು ಮಂಕನಾಗಿ ಮಾಡಿತು. ಹನ್ನೆರಡು ಗಂಟೆಯ ಹೊತ್ತಿನಲ್ಲೇ ಅವನು ಒಲೆಯ ಮುಂದೆ ಕುಳಿತು ವಿಧವೆಯಾದ ವೇಣಿಯನ್ನು ಮದುವೆಮಾಡಿಕೊಳ್ಳುವ ಕನಸನ್ನು ಹೆಣೆಯುತ್ತಿದ್ದುದು. ಆ ಗಳಿಗೆಯಲ್ಲಿಯೇ ಅನಂತನಿಗೆ ಜ್ವರ ಬಂದದ್ದು. ಏನು ಸೋಜಿಗವಾದ ಏನು ಭಯಂಕರವಾದ ಘಟನೆ!

ಇಬ್ಬರೂ ಸದ್ದಿಲ್ಲದೆ ರೋಗಿಯ ಹತ್ತಿರ ಕುಳಿತಿದ್ದರು. ಕೃಷ್ಣನ ಮನಸ್ಸು ಅವನ ಸ್ವಾಧೀನ ತಪ್ಪಿ ಯೋಚನೆಗಳಿಂದಲೂ ಭಯದಿಂದಲೂ ವ್ಯಾಕುಲವಾಗಿತ್ತು. ಅವನು ಒಂದು ಮಾತನ್ನೂ ಆಡಲಾರದಾದನು. ವೇಣಿ ತಂದ ಕಾಫಿಯನ್ನು ಕತ್ತೆತ್ತದೆ ಕುಡಿದು ಕೃಷ್ಣಶಾಸ್ತ್ರಿ, "ಅನಂತ, ಹೋಗಿ ಬರುತ್ತೇನಪ್ಪ. ರಾಮು, ಇಲ್ಲೇ ಇರು. ತಿರುಗಿ ಬಂದು ನೋಡಿಕೊಂಡು ಹೋಗುತ್ತೇನೆ" ಎಂದು ಹೇಳಿ ಬೈಸ್ಕಲ್ ಹತ್ತಿದನು.

ಬೈಸ್ಕಲ್ ಹತ್ತಿದ ಮೇಲೆ ಎಲ್ಲಿಗೆ ಹೋಗಬೇಕೆಂದು ಕೃಷ್ಣಶಾಸ್ತ್ರಿಗೆ ತೋಚದೆ ಹೋಯಿತು. ಅಂದಿನ ಘಟನೆಗಳಿಂದ ಅವನ ಚೇತನವಡಗಿತ್ತು; ಬುದ್ಧಿ ಜಡವಾಗಿತ್ತು. ಭಯದಿಂದ ಆತನ ಆತ್ಮ ತಲ್ಲಣಿಸಿತು. ಬೀದಿಬೀದಿಯನ್ನು ತಿರುಗಿ ಲಾಲ್‌ಬಾಗಿನಲ್ಲಿ ಸ್ವಲ್ಪ ಹೊತ್ತು ಅಲೆದು, ತಿರುಗಿ ಅನಂತನ ಮನೆಗೆ ಬಂದನು. ರಾಮು ರೋಗಿಯ ಪಕ್ಕದಲ್ಲೇ ಇದ್ದು, ಅವನನ್ನು ಉಪಚರಿಸುತ್ತಿದ್ದನು. ಅನಂತನಿಗೆ ಜ್ವರವೇರಿತ್ತು. ಜ್ಞಾನತಪ್ಪಿ ಕಳವಳಕ್ಕೆ ಆರಂಭವಾಗಿತ್ತು. ಅವನ ಸ್ಥಿತಿಯನ್ನು ನೋಡಿ ರಾಮುವಿಗೆ ಗಾಬರಿಯಾಗಿತ್ತು. ವೇಣಿ ಮೆಲ್ಲನೆ ಅಳುತ್ತ ಒಂದು ಮೂಲೆಯಲ್ಲಿ ಕುಳಿತಿದ್ದಳು. ಈ ಅವಸ್ಥೆಯನ್ನು ನೋಡಿ ಕೃಷ್ಣನ ಮುಖ ಬಿಳುಪೇರಿತು. ರಾಮುನನ್ನು ಹೊರಕ್ಕೆ ಕರೆದು "ಈ ರಾತ್ರಿ ಹೇಗೋ ಕಳೆಯಿರಿ. ನಾಳೆ ಬೆಳಗ್ಗೆ ಬಂದು ನನ್ನನ್ನು ಕಾಣು. ಮುಂದಿನ ಯೋಚನೆ ಮಾಡೋಣ. ಹೆದರಬೇಡಿ. ಬರಿ

ಮಲೇರಿಯಾಜ್ವರ ಇರಬಹುದು. ಆ ಜ್ವರದ ಲಕ್ಷಣವೇ ಇಷ್ಟು. ನಾಳೆ ಬೆಳಿಗ್ಗೆ ಬಾ. ಖಂಡಿತ ಮರೆಯಬೇಡ. ನಾನು ಹೋಗುತ್ತೇನೆ," ಎಂದು ಹೇಳಿ ಅವನ ಸಮ್ಮತಿ ಪಡೆದು, ಬೈಸ್ಕಲ್ ಹತ್ತಿ ಮಲ್ಲೇಶ್ವರಕ್ಕೆ ತನ್ನ ಮನೆಗೆ ಹಿಂತಿರುಗಿದನು.

(೩)

ಆ ರಾತ್ರಿ ಕೃಷ್ಣಶಾಸ್ತ್ರಿಗೆ ಅನ್ನ ಸೇರದು. ಏನೋ ಗಾಬರಿ, ಏನೋ ವೇದನೆ. ಮನೆಯವರಿಗೆ ಇದರರ್ಥ ತಿಳಿಯದು. ಅವನ ತಾಯಿ "ಇದ್ಯಾಕೋ ಹೀಗಾಡುತ್ತೀಯ ಈ ದಿನ" ಎಂದು ಕೇಳಿದ್ದಕ್ಕೆ ರೇಗಿಬಿಟ್ಟನು. ಹಾಸಿಗೆಯ ಮೇಲೆ ಹೊರಳಿದ್ದೂ ಹೊರಳಿದ್ದೆ, ನಿದ್ದೆ ಬಾರದು. ಮೌಢ್ಯದಿಂದಲೋ ಏನೋ ಅನಂತನ ರೋಗಕ್ಕೂ ತನ್ನಂದಿನ ಯೋಚನೆಗಳಿಗೂ ಕಾರ್ಯಕಾರಣ ಭಾವ ವನ್ನು ಕಲ್ಪಿಸಿ ಆತನ ಮನಸ್ಸು ಕೊಲೆಪಾತಕನದಂತೆ ಕ್ಷುಣ್ಣವಾಗಿತ್ತು. ಅಂದೆಲ್ಲಾ ಅವನಿಗೆ ಮಾಕ್ಬೆತ್ತಿನ ನೆನಪೇ. ಕೊಲೆಪಾತಕನಾದ ಮಾಕ್ಬೆತ್ತಿ ನಲ್ಲಿ ಅಂದು ಅವನಿಗೆ ಹುಟ್ಟಿದಷ್ಟು ಅನುತಾಪ ಹಿಂದೆ ಎಂದೂ ಹುಟ್ಟಿರಲಿಲ್ಲ. ಮಾಕ್ಬೆತ್ತನು ತನ್ನ ದಣಿಯನ್ನು ತನ್ನ ಮನೆಯಲ್ಲೇ ಕೊಂದನಂತರ ಅವನು ಅನುಭವಿಸಿದ ಯಾತನೆಗಳನ್ನು ಇಂದು ಕೃಷ್ಣಶಾಸ್ತ್ರಿ ಆತ್ಮೀಕರಿಸುತ್ತಿದ್ದನು. ಮಾಕ್ಬೆತ್ತು ದೊರೆತನಕ್ಕಾಗಿ ತನ್ನ ದಣಿಯನ್ನು ಕೊಂದ. ಇಂದು ಅವನು ವೇಣಿಗಾಗಿ ಅನಂತನನ್ನು ಕೊಂದ. ಅವನ ಪಾಪಿಷ್ಠ ಬಯಕೆ ಅಷ್ಟು ಕ್ರೂರ ವಾದದ್ದೆ? ವಿಷಕ್ರಿಮಿಯಂತೆ ಅನಂತನನ್ನು ತಾಗಿತೆ? ಅನಂತ ಬದುಕುತ್ತಾ ನೆಯೇ? ತನ್ನ ಸರ್ವಸ್ವವನ್ನೂ ಕೊಟ್ಟಾನು, ಅನಂತನ ಜೀವಕ್ಕೆ. ಅನಂತ ಸತ್ತರೆ ತಾನು ಬದುಕಲಾರ. ಅಯ್ಯೋ, ಪಾಪಿ! ಪಾಪಿಗೆ ಹೇಗೆ ನಿದ್ದೆ ಹತ್ತೀತು. ಇನ್ನು ಶಾಂತಿಯೆಲ್ಲಿ? ನಿದ್ದೆಯೆಲ್ಲಿ?

ತನ್ನ ಪಾಪದ ಮಹತ್ವದ ತಿಳಿವು ಕೃಷ್ಣಶಾಸ್ತ್ರಿಯ ಮನದಲ್ಲಿ ಅನಿರ್ವಚ ನೀಯವಾದ ಯಾತನೆಯನ್ನು ಹೂಡಿತ್ತು. ಆ ಬವಣೆಯ ಭಾರವನ್ನು ತಾಳ ಲಾರದೆ ಅವನು ತನ್ನ ಹಾಸಿಗೆಯ ಮೇಲೆ ಹೊರಳಿ ಅತ್ತುಬಿಟ್ಟನು.

ಕೃಷ್ಣನ ಕಣ್ಣೀರು ಆತನ ಮನಸ್ಸಿನ ತಳಮಳವನ್ನು ಸ್ವಲ್ಪ ಇಳುಹಿ ಶಾಂತಿಯನ್ನು ತಂದಿತು. ಹಾಗೆಯೇ ಅವನಿಗೆ ಸ್ವಲ್ಪ ಝೊಂಪೂ ಹತ್ತಿತು. ಆದರೆ ಆತನಾತ್ಮನನ್ನು ಸುಷುಪ್ತಿಯ ಮಡಲಿನಲ್ಲಿ ನಿದ್ರೆ ಹಾಕಲಿಲ್ಲ.

ಬಾಹ್ಯ ಪ್ರಪಂಚದಿಂದ ಕನಸಿನ ದುಷ್ಪ್ರಪಂಚಕ್ಕೆ ಅವನನ್ನು ಒಯ್ಯುವ ದೋಣಿ ಮಾತ್ರವಾಗಿತ್ತಾ ನಿದ್ರೆ. ಭಯಂಕರವಾದ ಕನಸೊಂದನ್ನು ಕಂಡು ಸ್ವಲ್ಪ ಹೊತ್ತಿನ ಮೇಲೆ ಕೃಷ್ಣ ಚೀರಿದನು.

ಅಲ್ಲಾವುದ್ದೀನನ ಹಣತೆಯ ಭೂತದಂತೆ ಕೃಷ್ಣನ ಆಸೆ ದೊಡ್ಡ ದೇಹವನ್ನೂ ಭಯಂಕರ ರೂಪವನ್ನೂ ತಾಳಿ ಅವನೆದುರಿಗೆ ನಮ್ರವಾಗಿ ನಿಂತು, "ಹಸಾದವೇನು, ಧಣಿಯೇ" ಎನ್ನುತ್ತಿದೆ. ಕೃಷ್ಣನು ಅದಕ್ಕೆ "ಹೋಗು, ವೇಣಿಯನ್ನು ನನ್ನವಳನ್ನಾಗಿ ಮಾಡು. ಅದಕ್ಕೆ ಅಡ್ಡಬರುವವರನ್ನು ತೊಡೆದುಬಿಡು. ಉಪಾಯದಿಂದ ಕೆಲಸವನ್ನು ಸಾಧಿಸು" ಎಂದು ಆಣತಿಯನ್ನು ಕೊಡುತ್ತಿದ್ದಾನೆ. ಭೂತ ಅನಂತನ ಜೀವವನ್ನು ಹಿಂಡುತ್ತಿದೆ. ಮರಣೋನ್ಮುಖನಾದ ಅನಂತನು ಭೂತವನ್ನು ಕಂಡು ಚೀರುತ್ತಿದ್ದಾನೆ. "ಇಗೋ, ಇಗೋ, ಭೂತ ಪ್ರಾಣ ಹಿಂಡುತ್ತಿದೆ. ಓಡಿಸಿ. ಹೋ ಹೋ, ಹೋಯಿತು ಜೀವ. ಅಲ್ಲಿ, ಅದರ ಮರೆಯಲ್ಲಿ, ಹುಲಿವೇಷದವನನ್ನು ಗೊಂಡೆ ಹಿಡಿದು ಆಡಿಸುವವನಂತೆ, ಕೃಷ್ಣ 'ಹಿಂಡು' ಅನ್ನುತ್ತಾನೆ. ಹೋ ಹೋ ಹೋಯಿತು...." ಅನಂತ ಸಾಯುತ್ತಾನೆ.

ಭೂತ ವೇಣಿಯ ಮನಸ್ಸನ್ನು ಸೋಜಿಗವಾದ ಯಾವುದೋ ಒಂದು ರೀತಿಯಲ್ಲಿ ಒಲಿಸಿ ಕೃಷ್ಣನೆಡೆಗೆ ಕರೆದುಕೊಂಡು ಬರುತ್ತದೆ. ಕೃಷ್ಣನು ಅವಳನ್ನು ಆಲಂಗಿಸಿ ಮುತ್ತಿಡುವಷ್ಟರಲ್ಲಿ ಅವರ ನಡುವೆ ಅನಂತನ ಆತ್ಮ ನೆಪ್ಪು "ಛೀ! ಛೀ!! ಛೀ!!! ಇದಕ್ಕೋ ಕೃಷ್ಣ ನನ್ನನ್ನು ಕೊಲ್ಲಿಸಿದ್ದು? ವೇಣೀ! ನನ್ನನ್ನು ಕಂಡರೆ ನಿನಗೆ ಬಹಳ ಪ್ರೇಮವಿತ್ತಲ್ಲವೆ! ಹ ಹ್ಹ ಹ್ಹಾ, ನನ್ನ ಕೊಲೆಗೆ ನೀನೂ ಸಹಾಯಕಳಾಗಿದ್ದೆಯಾ? ಪತಿಘಾತಿನಿ, ಪಿಶಾಚಿ! ನನ್ನ ಪತ್ನಿಯನ್ನು ನನ್ನ ಕೊಲೆಗಡುಕನು ಮುತ್ತಿಡುವ ಇಂಥ ಸುಖಮಯವಾದ ದೃಶ್ಯ ನರಕದಲ್ಲಿಯೂ ನನಗೆ ಸಿಕ್ಕುತ್ತದೆಯೆ? ಹ್ಹ ಹ್ಹಾ!" ಎಂದು ವಿಕಟವಾಗಿ ನಗುತ್ತಾ ಅವರ ಸುತ್ತಲೂ ಕುಣಿಯುತ್ತಿದೆ. ವೇಣಿಗೆ ಆಗ ಎಲ್ಲವೂ ಅರ್ಥವಾಗಿ ಅವಳು ಕಾಳಿಯಂತೆ ಕನಲಿ, ಕೃಷ್ಣನ ಕತ್ತನ್ನು ಹಿಸಕುತ್ತಿದ್ದಾಳೆ.

* * *

ಅಲ್ಲಿಗೆ ಕೃಷ್ಣನ ಕನಸು ಹರಿಯಿತು. ಚೇರಿ ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತನು. ತನ್ನ ಸುಡುವ ತಲೆಯನ್ನು ತನ್ನ ತಾಯಿ ತಡುಹುತ್ತಾ ನುಡಿಯುತ್ತಿದ್ದ ಸವಿಮಾತುಗಳು ಆಗ ಅವನ ಕಿವಿಗೆ ಬಿದ್ದುವು. ಬೆಳಕು ಹರಿಯುತ್ತಿತ್ತು.

(೪)

ಕೃಷ್ಣನೆದ್ದು ಮುಖ ಒರಸಿಕೊಳ್ಳುವ ಹೊತ್ತಿಗೆ ರಾಮು ಬಂದನು. ಆತುರದಿಂದಲೂ, ನಚ್ಚಿನಿಂದಲೂ ಅನಂತನ ಯೋಗಕ್ಷೇಮವನ್ನು ಕೇಳುವ ಕೃಷ್ಣಶಾಸ್ತ್ರಿಗೆ ರಾಮು ನುಡಿದ ಉತ್ತರ ಸಮಾಧಾನ ತರಲಿಲ್ಲ. ಆತನ ತಲ್ಲಣ ವನ್ನು ಇಮ್ಮಡಿಸಿತು. ರಾಮು ಈ ರೀತಿ ಎಂದನು.

"ರಾತ್ರಿ ಎಷ್ಟು ಕಷ್ಟದಿಂದ ಕಳೆದೆವೋ ದೇವರೇ ಬಲ್ಲ. ಬಂದ ಜ್ವರ ಇನ್ನೂ ಆರಿಲ್ಲ. ಅನಂತನಿಗೆ ಮೂರು ಗಂಟೆಗೆ ಜ್ಞಾನತಪ್ಪಿ, ಅವನು ಕೂಗು ವುದಕ್ಕೆ ಪ್ರಾರಂಭಿಸಿದ. ಈಗತಾನೆ ಕೂಗಾಟ ಸ್ವಲ್ಪ ನಿಂತು ಮಲಗಿದಾನೆ. ನಾಲಗೆ ಕಪ್ಪಗೆ ತಿರುಗಿದೆ. ವಿಷಮಿಸಿರುವಂತೆ ಕಾಣುತ್ತೆ. ದೇವರು ಕಾಪಾ ಡಬೇಕು. ಚಿನ್ನದಂಥ ಹುಡುಗ. ಏನೂ ತೋಚುವುದಿಲ್ಲ. ನಿನಗೆ ಹೇಳೋಣ ಎಂದು ಇಲ್ಲಿಗೆ ಓಡಿ ಬಂದೆ."

ಕೃಷ್ಣ : ಅನಂತನಿಗೆ ವಿಷಮಿಸಿದೆಯೆ? ಬದುಕುವ ಆಶೆಯೇ ಇಲ್ಲವೆ? ಅಯ್ಯೋ ಅಂಥವನು ಸಾಯುವುದುಂಟೇನೋ? ಆಕೆಯ ಗತಿಯೇನೋ? ರತ್ನದಂತಹ ಹುಡುಗಿ.

ಕೃಷ್ಣ ಉಕ್ಕಿ ಬರುತ್ತಿದ್ದ ಕಂಬನಿಯನ್ನು ಬಹು ಕಷ್ಟದಿಂದ ಬಿಗಿದಿದ್ದನು.

ರಾಮು: ನೀನು ನನಗಿಂತ ಸರಿ. ನೀನೇನಾದಾರೂ ಉಪಾಯ ಹೇಳುತ್ತೀಯಾ ಎಂದು ನಾನು ಇಲ್ಲಿಗೋಡಿ ಬಂದರೆ ನನಗಿಂತ ಹೆಚ್ಚಾಗಿ ಉದ್ಗಾರ ತೆಗೆದುಬಿಟ್ಟೆ.

ರಾಮುನ ನುಡಿ ಕೃಷ್ಣನಿಗೆ ಸ್ವಲ್ಪ ನಾಚಿಕೆಯನ್ನುಂಟುಮಾಡಿತು. ಅನಂತ ಬದುಕಿದರೆ ತನಗುಂಟಾಗುವಷ್ಟು ಸುಖ ಇನ್ನೊಬ್ಬರಿಗಾಗುವುದಿಲ್ಲ ವೆಂದು ತಿಳಿದೂ ಅವನನ್ನು ಬದುಕಿಸುವ ಉಪಾಯವನ್ನು ಹುಡುಕಲು ಇತರರು ತನಗೆ ಹೇಳಬೇಕಾಯಿತಲ್ಲ ಎಂದು. ರಾಮುನ ಮಾತು ಅವನಿಗೆ

ಸ್ಫೂರ್ತಿಯನ್ನು ತಂದಿತು. ಜಗ್ಗನೆದ್ದು "ರಾಮು, ನಡೆ ಹೋಗೋಣ. ನಾನು ಹೇಳಿದಂತೆ ಕೇಳು, ಬಾ" ಎಂದು ಅವನನ್ನೆಳೆದುಕೊಂಡು ಬೀದಿಯ ಕಡೆ ಹೊರಟನು. ರಾಮುನು "ಇದೊಂದು ಇವನ ಹುಚ್ಚೇನೋ" ಎಂದುಕೊಂಡು ಅವನನ್ನು ಹಿಂಬಾಲಿಸಿದನು.

ಸ್ವಲ್ಪದೂರ ಹೋದ ಮೇಲೆ, ಮರೆತವನಂತೆ ಕೃಷ್ಣನು "ರಾಮು, ಸ್ವಲ್ಪ ತಾಳು" ಎಂದು ಅವನನ್ನು ನಡುದಾರಿಯಲ್ಲಿ ನಿಲ್ಲಿಸಿ ಮನೆಗೆ ಹಿಂದಿರುಗಿ ತನ್ನ ಹಣದ ಚೀಲವನ್ನು ತೆಗೆದುಕೊಂಡು ಬಂದು ಗೆಳೆಯನೊಡನೆ ಮುಂದುವರಿದನು. ದಾರಿಯಲ್ಲಿ ಒಂದು ಮೋಟಾರ್ ಗಾಡಿಯನ್ನು ಅವರು ಬಾಡಿಗೆಗೆ ತೆಗೆದುಕೊಂಡು, ಅದರಲ್ಲಿ ಅನಂತನನ್ನು ಮಲಗಿಸಿಕೊಂಡು, ಆಸ್ಪತ್ರೆಗೆ ಬಂದು ಸ್ಪೆಷಲ್ ವಾರ್ಡಿನಲ್ಲಿ ಬಿಟ್ಟರು. ಅಲ್ಲಿನ ಡಾಕ್ಟರಿಗೂ, ದಾದಿಗಳಿಗೂ ಏನೇನೋ ಕಿವಿಯಲ್ಲಿ ಹೇಳಿ ಕೃಷ್ಣ, ಅಲ್ಲಿಯವರೆಗೂ ತುಟಿಪಿಟಕ್ಕೆನ್ನದೆ ಆಶ್ಚರ್ಯದಿಂದಲೂ ಕುತೂಹಲದಿಂದಲೂ ತನ್ನ ನಡೆವಳಿಕೆಗಳನ್ನು ನೋಡುತ್ತಿದ್ದ ರಾಮುವಿಗೆ ಹೀಗೆಂದನು

"ರಾಮು, ವಿಶೇಷ ಬಳಕೆಯೂ ಸ್ನೇಹವೂ ಇಲ್ಲದ ಅನಂತನ ವಿಷಯದಲ್ಲಿ ಇವನಿಗೇಕೆ ಇಷ್ಟು ವಿಶ್ವಾಸ? ಈಗೇನೋ ಇವ ಕಾರಿಗೆ, ಸ್ಪೆಷಲ್ ವಾರ್ಡಿಗೆ ದುಡ್ಡು ಮುಂಗಡವಾಗಿ ಹಾಕಿಬಿಟ್ಟ. ನಾವೋ ದರಿದ್ರನಾರಾಯಣರು. ತೀರಿಸುವ ಬಗೆ ಹೇಗೆ? ಇವನ ಮರ್ಮ ದೇವರಿಗೆ ಗೊತ್ತು" ಎಂದು ಯೋಚಿಸುತ್ತಿದ್ದೀಯಾ, ನನಗೆ ಗೊತ್ತು. ನಿನ್ನ ಮುಖಭಾವದಿಂದ ಪತ್ತೆಮಾಡಬಲ್ಲೆ. ದುಡ್ಡಿನ ವಿಚಾರ ಯೋಚಿಸಬೇಡ. ಬೇಣಿ ಕೇಳಿದರೆ ನೀನು ಕೊಟ್ಟೆ ಅನ್ನು, ನಿನ್ನ ಹಂಗನ್ನು ಅವಳು ಅಲ್ಲಗಳೆಯುವುದಿಲ್ಲವಷ್ಟೆ. ಅನಂತನು ಉನ್ನತಸ್ಥಿತಿಗೆ ಬಂದಾಗ ಅವನಿಗೆ ಹೇಳು; ಬೇಕಾದರೆ ತೀರಿಸುತ್ತಾನೆ. ಈಗಲೇ ಹೇಳೀಯಾ, ಜೋಕೆ. ಈ ದುಡ್ಡನ್ನು ಸದ್ಯಕ್ಕೆ ನಿನಗೆ ಸಾಲ ಕೊಟ್ಟೆನೆಂದು ಭಾವಿಸಿಕೊ. ಹಿಂದಿರಿಗಿಸುವ ಯೋಚನೆ, ನಾನು ಕಷ್ಟಕ್ಕೆ ಸಿಕ್ಕಿದಾಗ. ನನ್ನ ಹತ್ತಿರ ಸಹಾಯಮಾಡುವ ಶಕ್ತಿಯಿದ್ದೂ ಹಿಂತೆಗೆದರೆ ಅನಂತನನ್ನು ಕೊಂದ ಪಾಪ ನನಗೆ ಬರುತ್ತದೆ. ನಾನು ಸಹಾಯ ಮಾಡದೆ ಅನಂತ ಸತ್ತರೆ ನಾನೇ ಅಲ್ಲವೇನಯ್ಯ ಬ್ರಹ್ಮಹತ್ಯಾಪಾತಕಕ್ಕೆ ಗುರಿಯಾಗುವವನು. ಸರಿ ಮತ್ತೆ, ತುಟಿಪಿಟಕ್ಕೆನ್ನಬೇಡ. ಆಸ್ಪತ್ರೆಯಲ್ಲಿ ಎಲ್ಲರಿಗೂ

ಹೇಳಿದ್ದೇನೆ. ನೀನೂ ಚೆನ್ನಾಗಿ ಅನಂತನನ್ನು ನೋಡಿಕೊ. ಸದ್ಯ ಅವನು ಬದುಕಿಕೊಂಡರೆ ಸಾಕು.

ರಾಮುನನ್ನು ಅನಂತನೊಡನೆ ಆಸ್ಪತ್ರೆಯಲ್ಲಿ ಬಿಟ್ಟು, ಕೃಷ್ಣಶಾಸ್ತ್ರಿ ಮನೆಗೆ ಹಿಂತಿರುಗಿದನು. ಆ ದಿನ ಅವನ ಮನಸ್ಸು ಸ್ವಲ್ಪ ಹಗುರವಾಗಿತ್ತು.

(೫)

ಅನಂತನಿಗೆ ಸಂಪೂರ್ಣವಾಗಿ ಗುಣವಾಗಲು ಒಂದು ತಿಂಗಳು ಹಿಡಿಯಿತು. ಮೂರು ದಿನಗಳವರೆಗೆ ಅವನ ಜೀವ ಸಾವಿನ ಹೊಸಲಿನಲ್ಲಿತ್ತು. ಆ ದಿನಗಳನ್ನು ಕೃಷ್ಣನು ಕಳೆದ ಬಗೆಯನ್ನು ಹೇಳುವುದೇ ಒಂದು ಕತೆಯಾಗುತ್ತದೆ. ಕೃಷ್ಣನು ಡಾಕ್ಟರಿಗೂ ದಾದಿಗಳಿಗೂ ಕೊಟ್ಟ ಪಾರಿತೋಷಕವೇ ಇನ್ನೂರು ರೂಪಾಯಿಗಳಿಗೆ ಬಂದಿತ್ತು. ದಿನಕ್ಕೆ ಐದು ರೂಪಾಯಿಗಳಂತೆ ಸ್ಪೆಷಲ್ ವಾರ್ಡಿಗೆ ಎಲ್ಲರೂ ಕಾಣುವ ಹಾಗೆ ಕೊಟ್ಟ ಖರ್ಚು ನೂರೈವತ್ತು ರೂಪಾಯಿಗಳು ಆಗಿತ್ತು. ಹಣ್ಣು ಹಂಪಲಿಗೆಷ್ಟೋ! ರಾಮುನಿಗೆ ಇದೆಲ್ಲಾ ಗೊತ್ತಿದ್ದರೂ ಕೃಷ್ಣನ ಸ್ವಭಾವವನ್ನು ತಿಳಿದವನಾದುದರಿಂದ ಹೆದರಿ ಯಾರೊಂದಿಗೂ ಹೇಳಲಿಲ್ಲ. ಅನಂತನೊಬ್ಬನಿಗೆ ಮಾತ್ರ ಸ್ಪೆಷಲ್ ವಾರ್ಡಿನ ಖರ್ಚು ಕೃಷ್ಣನದೆಂದು ಮನಸ್ಸು ತಡೆಯದೆ ಹೇಳಿದ್ದನು. ನೂರು ಸಲ ಮನಸ್ಸಿನಲ್ಲೇ "ನೀನು ದೇವರಯ್ಯ; ಮನುಷ್ಯನಲ್ಲ" ಎಂದುಕೊಂಡೂ ಇದ್ದನು.

ಕೊನೆಗೆ ಒಂದು ತಿಂಗಳಾದ ಮೇಲೆ ಅನಂತನನ್ನು ರಾಮುನೂ ಕೃಷ್ಣನೂ ಆಸ್ಪತ್ರೆಯಿಂದ ಮನೆಗೆ ಕರೆದುಕೊಂಡು ಬಂದರು. ಅನಂತನಿಗೆ ತಿರುಗಾಡುವ ಮಟ್ಟಿಗೆ ತ್ರಾಣ ಬಂದಿತ್ತು. ಮನೆಗೆ ಬಂದು ಹಾಸಿಗೆಯ ಮೇಲೆ ಕುಳಿತುಕೊಂಡ ಮೇಲೆ ಅನಂತ ಕೃಷ್ಣನನ್ನೂ ರಾಮುನನ್ನೂ ಹತ್ತಿರ ಕುಳ್ಳಿರಿಸಿಕೊಂಡು, ವೇಣಿಗೆ ಕಾಫಿ ಮಾಡುವ ಹಾಗೆ ಹೇಳಿ, ಕೃಷ್ಣನ ಕೈಹಿಡಿದುಕೊಂಡು ಅಮುಕಿ, ಗದ್ಗದ ಧ್ವನಿಯಿಂದ ಹೀಗೆಂದನು :

"ಕಿಟ್ಟು, ಅನ್ನು ದಿನದಿಂದ ನಿನಗೆ ಹೇಳಬೇಕೆಂದಿದ್ದೆ. ಸಮಯ ಸಿಕ್ಕಲಿಲ್ಲ. ಹೊಗಳುವುದಕ್ಕೆ ಪ್ರಾರಂಭಿಸಿಬಿಟ್ಟೆ ಎಂದು ಗಾಬರಿ ಪಡಬೇಡ. ನಿನ್ನನ್ನು ಹೊಗಳಿ ಪೂರೈಸುವುದಕ್ಕಾಗುತ್ತದೆಯೆ? ನಿನ್ನ ಋಣ ತೀರಿಸುವುದಕ್ಕಾಗುತ್ತದೆಯೆ? ನಿನ್ನ ಉಪಕಾರಕ್ಕೆ ಪ್ರತಿಯಾಗಿ ನನ್ನ ಸ್ನೇಹವನ್ನೂ,

ಸರ್ವಸ್ವವನ್ನೂ ಆಗಲೆ ಧಾರೆಯೆರೆದುಬಿಟ್ಟಿದ್ದೇನೆ. ಇಷ್ಟವಿದ್ದರೆ ಪರಿಗ್ರಹಿಸು, ಇಲ್ಲವಾದರೆ ಬಿಡು. ಒಂದು ಮಾತನ್ನು ಹೇಳಿಬಿಡುತ್ತೇನೆ ಕೇಳು.

ಸನ್ನಿ ಘುರಿದ ಮೇಲೂ, ಡಾಕ್ಟರು ಭರವಸೆ ಕೊಟ್ಟ ಮೇಲೂ, ನನಗೆ ಜೀವಿಸುವೆನೆಂಬ ನಂಬಿಕೆ ಇರಲಿಲ್ಲ. ಒಂದೊಂದು ಸಲ ಅಷ್ಟು ಸಂಕಟವಾಗಿ ಬಿಡುತ್ತಿತ್ತು. ನಾನು ಮೃತ್ಯುಶಯ್ಯೆಯಲ್ಲಿ ಮಲಗಿದೇನೆ ಎಂದೇ ಬಗೆದೆ. ಆಗ ವೇಣಿಯ ಯೋಚನೆ ಸುಳಿದು ನನ್ನ ಸಂಕಟವನ್ನು ನೂರು ಪಾಲು ಹೆಚ್ಚಿಸುತ್ತಿತ್ತು. ನಾನು ತೀರಿದರೆ ಅವಳ ಗತಿಯೇನೆಂದು. ನಮ್ಮ ಸಮಾಜ ದಲ್ಲಿ ವಿಧವೆಯರ ಪುನರ್ವಿವಾಹಕ್ಕೆ ಅವಕಾಶವಿಲ್ಲವಷ್ಟೆ. ನನಗೆ ಆ ಕೆಟ್ಟ ಸಂಪ್ರದಾಯದಲ್ಲಿ ಗೌರವವಿಲ್ಲ. ಮರಣ ಕಾಲದಲ್ಲಿ ರಾಮುವಿನ ಹತ್ತಿರ ಭಾಷೆ ತೆಗೆದುಕೊಂಡು 'ವೇಣಿಗೆ ಪುನಃ ಮದುವೆ ಮಾಡುವ ಏರ್ಪಾಡು ಮಾಡು, ಮಾಡದಿದ್ದರೆ ನನ್ನ ಆತ್ಮಕ್ಕೆ ತೃಪ್ತಿಯಿಲ್ಲ. ನನ್ನ ಚರಮಾವಸ್ಥೆಯ ಒಂದು ಬಯಕೆಯನ್ನು ನೆರವೇರಿಸುವೆನೆಂದು ಮಾತು ಕೊಡು, ಆಮೇಲೆ ಸುಖವಾಗಿ ಪ್ರಾಣ ಬಿಡುತ್ತೇನೆ' ಎಂದು ಅವನನ್ನು ಗೋಗರೆಯ ಬೇಕೆಂದಿದ್ದೆ. ಈ ಮಾತನ್ನು ವೇಣಿಗೆ ಒಂದೆರಡು ಸಲ ಹೇಳಿದೆ. ಅವಳು ಅತ್ತು 'ನಾನೂ ಚಿತೆ ಏರುತ್ತೇನೆ' ಎಂದುಬಿಡುತ್ತಿದ್ದಳು. ಹುಡುಗಿ, ಮುಗ್ಧೆ, ಅವಳಿಗೇನು ಗೊತ್ತು? ಆದರೆ ಆಕೆ ಪ್ರೇಮಮೂರ್ತಿ. ಏನೇನೋ ಹೇಳುವು ದಕ್ಕೆ ಹೊರಟೆ, ಹೋಗಲಿ. ಅವಳಿಗೆ ನಾನು ಹೋದ ಮೇಲೆ ತಕ್ಕ ವರ ಯಾರು ಎಂಬ ಯೋಚನೆ ಬೇರೆ ಬಂತು. ನೀನೇ ತಕ್ಕ ಪಾತ್ರನೆಂದು ನಿರ್ಧರಿಸಿದೆ. 'ಏನು ಸೌಜನ್ಯ, ಏನು ಔದಾರ್ಯ, ಸಹನೆ, ಎಂಥ ದಾನಶೂರ; ಇವನಿಗಿಂತಲೂ ನನ್ನ ಮೆಚ್ಚಿನ ದಾನಕ್ಕೆ ಪಾತ್ರರುಂಟೆ?' ಎಂದುಕೊಳ್ಳು ತ್ತಿದ್ದೆ. ಈ ಮಾತನ್ನು ನಿನಗೆ ಎಷ್ಟೋ ಸಲ ಹೇಳಬೇಕೆಂದಿದ್ದೆ. ಯಾವುದೋ ತಡೆಯುತ್ತಿತ್ತು. ನನ್ನನ್ನು ಬದುಕಿಸಿ, ಕೃಷ್ಣ, ನೀನು ವೇಣಿಯನ್ನು ಕಳೆದು ಕೊಂಡೆ. ಅಲ್ಲವೇನಯ್ಯಾ ರಾಮು?"

ಎಲ್ಲರೂ ನಕ್ಕರು. ಅಷ್ಟು ಹೊತ್ತಿಗೆ ಕಾಫಿಯನ್ನು ತೆಗೆದುಕೊಂಡು ಬಂದ ವೇಣಿಯೂ ಕೃಷ್ಣನ ಕಡೆ ನೋಟವನ್ನು ಬೀರಿ ಮೃದುವಾಗಿ ನಕ್ಕಳು. ಆ ನೋಟವನ್ನು ತಪ್ಪಾಗಿ ಕೃಷ್ಣ ತಿಳಿದುಕೊಳ್ಳಲಿಲ್ಲ. ಆ ನಗೆಯಲ್ಲಿ ತನ್ನ ವಿಷಯಿಕವಾಗಿ ವೇಣಿಗಿದ್ದ ಕೃತಜ್ಞತೆ—ಕೃತಜ್ಞತೆಯೆಷ್ಟೋ ಅಷ್ಟೆ—ವ್ಯಕ್ತ

ವಾಗಿತ್ತು. ಮತ್ತು ತನ್ನ ಪತಿಯಲ್ಲಿ ಆಕೆಗಿದ್ದ ಪ್ರಣಯವೂ ಅಡಕವಾಗಿತ್ತು. ಗಂಡಹೆಂಡಿರ ಆ ಪ್ರೇಮವನ್ನು ಕಂಡು ಕೃಷ್ಣನಿಗೆ ಆಗಲೂ ಸ್ವಲ್ಪ ಅಸಮಾಧಾನವಾಯಿತು. ಈ ಭಾವವುಂಟಾದುದಕ್ಕೆ ಅವನು ತನ್ನನ್ನು ತಾನೆ ನಿಂದಿಸಿಕೊಂಡನು. 'ನೀನು ಒಳ್ಳೆಯ ತಮಾಷೆ ಮನುಷ್ಯನಯ್ಯ' ಎಂದುಕೊಂಡು ಎಲ್ಲರಿಗಿಂತಲೂ ಗಟ್ಟಿಯಾಗಿ ಆತನೂ ನಕ್ಕನು.

ಅನಂತನ ಮನೆಯಿಂದ ರಾಮನೂ ಕೃಷ್ಣನೂ ಮಲ್ಲೇಶ್ವರಕ್ಕೆ ಹಿಂತಿರುಗಿ ತಮ್ಮ ತಮ್ಮ ಮನೆಗಳಿಗೆ ಕವಲೊಡೆಯುವ ದಾರಿಯಲ್ಲಿ ಅಗಲಿ ಹೋಗುವಾಗ, ಕೃಷ್ಣ ರಾಮುನನ್ನು ಕುರಿತು: "ರಾಮು, ನೀನು ಷೇಕ್ಸ್‌ಪಿಯರಿನ ಒಂದು ಪದ್ಯವನ್ನು ಓದಿದ್ದೀಯಾ? 'ಕಲ್ಪನೆ'ಯ ಮೇಲೆ ಬರೆದದ್ದು. ಎಷ್ಟು ಚೆಲುವಾದ ಪುಟ್ಟ ಹಾಡಯ್ಯ ಅದು. 'ಕಲ್ಪನೆಯನ್ನು ಹಳ್ಳ ತೋಡಿ ಹೂಳಿ' ಎಂದು ಆ ಮಹಾತ್ಮನು ಹೇಳಿದಂತೆ ನಾನೂ ಕುಳಿ ತೋಡಿ ಅದನ್ನು ಆ ದಿನ ಹೂಳಿದ್ದರೆ, ನನ್ನ ಈ ಔದಾರ್ಯ ಪ್ರಕಾಶಕ್ಕೆ ಬರುತ್ತಿತ್ತೇನು? ನಾನೆ ಉದಾರಿ? ನನ್ನ ಔದಾರ್ಯಕ್ಕೆ ಬೆಂಕಿ ಹಾಕಿದರು! ನೀವು ನನಗಲ್ಲ— ಕಲ್ಪನೆಗಯ್ಯಾ, ಮೌಢ್ಯಕ್ಕಯ್ಯಾ, ಕೃತಜ್ಞರಾಗಿರಬೇಕಾದದ್ದು, ನಾನೆ ಉದಾರಿ?" ಎಂದು ಹೇಳಿ ತನ್ನೊಳಗೆ ತಾನೆ ನಗುತ್ತಾ ಮುಂದೆ ಹೊರಟನು.

ರಾಮರಾಯ ತನ್ನ ಮನಸ್ಸಿನಲ್ಲೇ "ನೀನು ಏನಾದರೂ ಹೇಳಿಕೊ. ನಿನ್ನ ಮಾತು ನನಗೆ ಅರ್ಥವಾದರೆ ತಾನೆ? ನನಗೆ ಇಷ್ಟು ಗೊತ್ತು: ನೀನು ದೇವರಂತಹ ಮನುಷ್ಯ. ನನಗೆ ಗೊತ್ತಿರಬೇಕಾದ್ದೂ ಅಷ್ಟೆ."

# ರಂಗರಾಯ ಸಂಗೀತವನ್ನು ಕೇಳಿದುದು

ಸಂಜೀವರಾಯರ ಹೆಸರನ್ನು ಕೇಳದವರಾರು? ಅವರು ಕೊಳಲು ಬಾರಿಸುವುದನ್ನು ಕೇಳಿ ಮೈ ಮರೆಯದವರಾರು? ಏನು ಅಸದೃಶವಾದ ಪ್ರತಿಭೆಯಿಂದ ಅವರು ರಾಗಗಳನ್ನು ನುಡಿಸುತ್ತಾರೆ! ಅವರ ಮುರಲೀ ನಾದದ ಮಾಯೆ ತಾನೆ ಎಂಥದು! ಕೇಳುವವರ ಹೃದಯವನ್ನು ಹೊಕ್ಕು, ಮಲಗಿರುವ ಭಾವಗಳನ್ನೆಬ್ಬಿಸಿ, ರಸಾನುಭವವನ್ನುಂಟು ಮಾಡಿ, ಆ ರಸಾನುಭವವನ್ನು ನಾದಬ್ರಹ್ಮದಲ್ಲಿ ಅಳವಡಿಸಿ, ಆತ್ಮವನ್ನು ಅನಂತದಲ್ಲಿ ಲೀನ ಮಾಡುವ ಮಾಯೆಯದು. ಅವರ ವೇಣುವಾದನವು ಕಲೆಯ ಚರಮಾವಧಿ. ಇಂಥವರ ಕೊಳಲನ್ನು ಕೇಳುವುದಕ್ಕೆ ಆ ದಿನ ಶಂಕರಯ್ಯನವರ ಹಜಾರದಲ್ಲಿ ಬೆಂಗಳೂರಿನ ರಸಿಕರು ಕಿಕ್ಕಿರಿದು ನೆರೆದಿದ್ದರು. ಸಂಗೀತಪ್ರೇಮಿಗಳಾದ ರಂಗರಾಯನೂ ಶ್ರೀನಿವಾಸರಾಯನೂ ಜಾಗ ಸಿಕ್ಕದೆ ಪೇಚಾಡಬಾರದೆಂದು ಅರ್ಧ ಗಂಟೆ ಮುಂಚೆಯೇ ಸಭೆಯಲ್ಲಿ ಕುಳಿತುಬಿಟ್ಟಿದ್ದರು.

ರಂಗರಾಯನೂ ಶ್ರೀನಿವಾಸರಾಯನೂ ಆಪ್ತ ಸ್ನೇಹಿತರು, ಸಮವಯಸ್ಕರು, ಅವಿವಾಹಿತರು ಮತ್ತು ಸಹಾಧ್ಯಾಯಿಗಳು. ಮೂರು ವರ್ಷಗಳ ಹಿಂದೆ ಬೆಂಗಳೂರಿನ ವೈಜ್ಞಾನಿಕ ಮಹಾಪಾಠಶಾಲೆಯಲ್ಲಿ ರಂಗನಿಗೆ ಶ್ರೀನಿವಾಸರಾಯನ ಪರಿಚಯವಾಯಿತು. ಶ್ರೀನಿವಾಸನ ಸ್ಫುರದ್ರೂಪವೂ, ನಗುಮೊಗವೂ, ಎಲ್ಲರೆದೆಯಲ್ಲಿಯೂ ನೋಡಿದ ಮಾತ್ರದಿಂದಲೇ ಸ್ನೇಹವನ್ನು ಬಿತ್ತುವ ಆತನ ನಡೆಯೂ, ನುಡಿಯೂ, ಸರಸವೂ, ಸರಳಸ್ವಭಾವವೂ ರಂಗನನ್ನು ಆಕರ್ಷಿಸಿದುವು. ರಂಗನ ನಿಷ್ಕಾಪಟ್ಯವೂ, ಉನ್ನತಜೀವನವೂ, ಔದಾರ್ಯಗಾಂಭೀರ್ಯಗಳೂ, ಎಲ್ಲಕ್ಕಿಂತಲೂ ಅವನ ಹೊಳಪಿನ ಕಣ್ಣುಗಳಲ್ಲಿ ಅಡಗಿದ್ದ, ಹೆರರ ಅಂತಃಕರಣವನ್ನು ಅನುಕಂಪದಿಂದ ಮುಟ್ಟಬಲ್ಲ ಒಂದು ವಿಧವಾದ ಶಕ್ತಿಯೂ ಶ್ರೀನಿವಾಸನನ್ನು ಆಕರ್ಷಿಸಿದುವು. ಹೀಗೆ ಒಬ್ಬನ ಬಾಳಿನ ಅರಕೆಯನ್ನು ಮತ್ತೊಬ್ಬನು ತುಂಬುವಂತಿದ್ದ ಇವರಿಬ್ಬರ ಪರಿಚಯವು ಸ್ನೇಹವಾಗಿ ಪರಿಣಮಿಸಿದುದರಲ್ಲಿ ಏನೂ ಆಶ್ಚರ್ಯವಿಲ್ಲ.

ರಂಗನು ಕುರೂಪಿಯಲ್ಲ. ಶ್ರೀನಿವಾಸನಷ್ಟು ಪ್ರಸ್ಫುಟರೂಪವಂತನೂ ಅಲ್ಲ. ಅಗಲವಾದ ಹಣೆ; ತಿದ್ದಿದ ಹುಬ್ಬು; ಉದ್ದವಾದ ಎಸಳಾದ ಮೂಗು; ಮನೋದಾರ್ಢ್ಯವನ್ನು ಸೂಚಿಸುವ, ನಗೆಯನ್ನು ತಡೆಯುವುದಕ್ಕೆಂದೇ ಕಡೆಯಲ್ಪಟ್ಟ ತುಟಿಗಳು; ಬತ್ತಿದ ಕೆನ್ನೆಗಳು; ಸ್ವಲ್ಪ ಬಾಗಿದ ಬೆನ್ನು; ಉಜ್ವಲವಾದ, ಅಗಲವಾದ, ಅಂತರ್ದೃಷ್ಟಿಯುಳ್ಳ, ಆದರೆ ಕುಳಿಬಿದ್ದ ಕಣ್ಣುಗಳು; ವ್ಯಾಯಾಮ ನಿಯಮಗಳಿಲ್ಲದುದರಿಂದ ದೃಢವಲ್ಲದ ಕೃಶವಾದ ಶರೀರ. ಇಂಥವನು ರೂಪವಂತನಲ್ಲದಿದ್ದರೂ ಕುರೂಪಿಯಲ್ಲ. ಯಾವುದೋ ವಿಷಣ್ಣತೆಯ ಜವನಿಕೆಯಲ್ಲಿ ಈತನ ವ್ಯಕ್ತಿತ್ವ ಮರೆಗೊಂಡಿತ್ತು. ಇಪ್ಪತ್ತ ಮೂರು ವರುಷಗಳ ಹರೆಯದ ಈತನನ್ನು ನೋಡಿದವರು ನಲವತ್ತಮೂರು ವರ್ಷಗಳಿರಬಹುದು ಎನ್ನುತ್ತಿದ್ದರು. ಶ್ರೀನಿವಾಸನಿಗೆ ಸ್ನೇಹಿತರಲ್ಲದಿದ್ದವರು ಮಹಾಪಾಠಶಾಲೆಯಲ್ಲಿ ಅಪೂರ್ವವೆಂದರೆ ರಂಗನ ಸ್ನೇಹಿತರನ್ನು ಬೆರಳಿನ ಮೇಲೆ ಎಣಿಸಬಹುದಾಗಿತ್ತು. "ನನ್ನನ್ನು ತಿಳಿಯಬೇಕಾಗಿದ್ದರೆ, ನನ್ನ ಹತ್ತಿರ ಸುಳಿಯಬಹುದಾದರೆ, ನನ್ನನ್ನು ಗೌರವಿಸಬೇಕು. ಗೌರವಿಸದಿದ್ದ ವರಿಗಿಲ್ಲೇನು ಕೆಲಸ?" ಎನ್ನುವಂತಿತ್ತು ಈತನ ಮುಖಭಾವ. ಇಂಥವನಿಗೆ ಸ್ನೇಹಿತರೆಲ್ಲಿ ದೊರೆಯಬೇಕು? ಸಹಾಧ್ಯಾಯಿಗಳಲ್ಲಿ ಈತನನ್ನು ಬಲ್ಲ ಕೆಲ ವರು "ಏನು ಜಂಭವಯ್ಯಾ ಇವನಿಗೆ, ಮಾತಾಡಿದರೆ ಮುತ್ತು ಉದರು ತ್ತೇನೋ. ಆತ್ಮತೃಪ್ತಿಯಿದ್ದರೆ ಹೀಗೆ ಇರಬೇಕು. ಬಸವನ ಹುಳುವನ್ನು ಮೀರಿಸಿದಾನಯ್ಯಾ ಈತ ಅದರಲ್ಲಿ" ಎನ್ನುತ್ತಿದ್ದರು.

ರಂಗರಾಯನನ್ನು ಹೋಲಿಸಬಹುದಾಗಿದ್ದರೆ ಸಂಜೆಯ ಬೂದು ಬಣ್ಣದ ಆಕಾಶವನ್ನು ದೃಷ್ಟಿಸಿ ನೋಡಿದರೆ ಸ್ವಲ್ಪ ಹೊತ್ತಿನ ಮೇಲೆ ಕಾಣಿಸಿ ಕೊಳ್ಳುವ ಕಿರುತಾರಗೆಗೆ ಹೋಲಿಸಬಹುದಾಗಿತ್ತು. ಶ್ರೀನಿವಾಸನನ್ನೋ? ಎಲ್ಲೆಡೆಯಲ್ಲೂ ನುಸುಳಿ, ಅಂಧಕಾರವನ್ನು ಚೆದರಿಸಿ, ಸಂತಸವನ್ನು ಚೆಲ್ಲುವ ಸಜೀವವಾದ ಸೂರ್ಯಕಿರಣಕ್ಕೆ ಹೋಲಿಸಬಹುದಾಗಿತ್ತು.

ಸಂಗೀತಕ್ಕೆ ಪ್ರಾರಂಭವಾಗಿದೆ. ಮೊದಲು ಎರಡು ಕೀರ್ತನೆಗಳನ್ನು ಬಾರಿಸಿ ಸಂಜೀವರಾಯರು ಮುಖಾರಿ ರಾಗವನ್ನು ಆಲಾಪನೆ ಮಾಡುವು ದಕ್ಕೆ ತೊಡಗಿದಾರೆ. ಸಂಜೀವರಾಯರ ಕೊಳಲಿನಲ್ಲಿ ಹೊರಬಿದ್ದ ಆ ರಾಗ ದಲ್ಲಿ ಎಂತಹ ಮಾಧುರ್ಯವಿದೆ! ಏನು ವಿಸ್ಮಯಜನಕವಾದ ರೀತಿಯಲ್ಲಿ ಆ

ರಾಗವನ್ನು ಬಾರಿಸುತ್ತಿದಾರೆ! ಮೈಸೂರಿನ ಅರಮನೆಯ ಮುಂದೆ ನವ ರಾತ್ರಿಯಲ್ಲಿ ಬಿಡುವ ಆಕಾಶ ಬಾಣವನ್ನು ನೀವು ನೋಡಿರಬಹುದು. ಸುಳಿ ಸುಳಿಯಾಗಿ ಆಕಾಶಕ್ಕೆ ಜ್ಯೋತಿಯೊಂದು ಹಾರಿ, ನಭದಲ್ಲಿ ಸಶಬ್ದವಾಗಿ ಒಡೆದು, ಕೆಲವು ಕಿಡಿಗಳು ನಕ್ಷತ್ರಗಳಂತೆಯೂ, ಕೆಲವು ಮಿಂಚಿನ ಮಿನಾನು ಗಳಂತೆಯೂ ಹೊಳೆದು ಅಳಿದು ಹೊಳೆದು ಅಳಿದು ಕೆಳಕ್ಕೆ ಬೀಳುತ್ತವೆ. ಇವರ ಮುಖಾರಿಯ ಒಂದು ರೀತಿ ಇದನ್ನು ಹೋಲುತ್ತಿತ್ತು. ಮತ್ತೊಂದು ರೀತಿ ಕಲ್ತೊಟ್ಟಿಲಿನಲ್ಲಿ ಉರುಳುವ ತೊರೆಯ ವಕ್ರಗಮನವನ್ನು ನೆನಪಿಗೆ ತರುತ್ತಿತ್ತು. ಮತ್ತೊಂದು ಬಗೆ ಕಿರುತಾರೆಗೆಗಳಿಂದ ಕಿಕ್ಕಿರಿದ ನಡುವಿರು ಳಿನ ಆಕಾಶವನ್ನು ನೋಡಿದರೆ ಉಂಟಾಗುವ ಮೈಮರೆವನ್ನು ಮರುಕೊಳಿಸು ತ್ತಿತ್ತು. ಹೀಗೆಯೇ—ಏನು ಅದ್ಭುತವಾದ ಗಾನಕಲೆಯದು! ಸಭೆ ಗಾನ ಲೋಲುಪತೆಯಿಂದ ನೀರವವಾಗಿದೆ. ಶ್ರೀನಿವಾಸರಾಯ ನೆಟ್ಟ ಕಣ್ಣು, ಬಿಟ್ಟ ಬಾಯಿಗಳಿಂದ ಗಾನಪೀಯೂಷವನ್ನು ಹೀರುತ್ತಿದ್ದಾನೆ. ರಂಗರಾಯನ ಕಂಗಳು ಮುಚ್ಚಿವೆ. ತಾನಿರುವೆಡೆಯನ್ನು ಮರೆತು ನಾದಬ್ರಹ್ಮದಲ್ಲಿ ಆತನು ತನ್ನ ಬಾಳನ್ನು ಐಕ್ಯಮಾಡಿದ್ದಾನೆ. ಅದೊಂದು ತರದ ನಿದ್ದೆ. ಆ ನಿದ್ದೆ ತರುವ ಕನಸು ಸೋಜಿಗವಾದುದು. ಆ ಕನಸಿನಲ್ಲಿ ಒಂದು ಬಾಳನ್ನು ಬಾಳಬಹುದು. ಎಂತಹ ಅನುಭವ! ಎಂತಹ ಬಾಳು! ರಂಗರಾಯ ಅಂದು ಗಾನರಸದ ದಿವ್ಯಲೋಕವೊಂದನ್ನು ಕಟ್ಟಿ ತನ್ನ ಬಾಳನ್ನುಅದರಲ್ಲಿ ತೊಳಲಬಿಟ್ಟದ್ದಾನೆ. ಕೊಳಲು ಬಾರಿಸುವವರು ಸಂಜೀವರಾಯರು, ಕೇಳುವವನು ತಾನು, ಎಂಬ ಅರಿವಿಲ್ಲ ಆತನಿಗೆ. ಆತನ ಹೃದಯದಲ್ಲಿ ಅಂದಿನವರೆಗೆ ಮೂಕವಾಗಿದ್ದ ಭಾವನೆಗಳಿಗೂ ರಸಗಳಿಗೂ ಇಂದು ಆ ಕೊಳಲು ನುಡಿಗೊಡುತ್ತಿದೆ. ಅವನಿಗೆ, ಮೂಕನಿಗೆ ಬಾಯಿಬಂದಂತಾಗಿದೆ.

ಆ ಮುರಲಿ ಅಂದು ನುಡಿಯುತ್ತಿರುವುದು ಆತನ ಆತ್ಮಕಥೆಯನ್ನು. ಆ ಕಥೆ ಒಟ್ಟಿನಲ್ಲಿ ವಿಷಾದಮಯವಾದುದು. ಅದರಲ್ಲಿ ಶೃಂಗಾರಾದಿ ರಸ ಗಳಿಲ್ಲದೆ ಇಲ್ಲ. ಆದರೆ ಇವು ಕರುಣೆಗೆ ಪೋಷಕವಾಗಿವೆ. ಕರುಣರಸಪರಿ ಪೂರಿತವಾದ ಆ ಕಥೆಯ ವಸ್ತು ತಾನೆ ಯಾವುದು? ಎರಡು ಕಣ್ಣುಗಳು! ಪ್ರತಿಯೊಂದು ಜೀವಸ್ವರದಲ್ಲಿಯೂ, ಆರೋಹಣ ಅವರೋಹಣ ಕ್ರಮ ಗಳಲ್ಲಿಯೂ, ಮೂರ್ಛಾಸ್ಥಾನಗಳಲ್ಲಿಯೂ, ರಾಗವು ಸ್ವರಗಳಲ್ಲಿ ಸಂಚರಿಸಿ

ಶ್ರುತಿಸುಷುಪ್ತಿಯಲ್ಲಿ ಲಯವಾಗುವಾಗಲೂ, ಗಾನರಸದಲ್ಲಿ ತೇಲಿ ಮುಳುಗಿ, ಗಾನದ ಆತ್ಮದಂತಿರುವ ಎರಡು ಕಣ್ಣುಗಳು! ರಾಗಭಾವಗಳನ್ನು ಅನುಸರಿಸಿ ರಸಗಳಲ್ಲಿ ಆಂದೋಳನವಾಗಿ, ಕೆಲವೆಡೆಯಲ್ಲಿ ಕಂಬನಿಯಿಂದ ತೊಯ್ದು, ಕೆಲವು ವೇಳೆ ನಗೆಯಿಂದ ಬೆಳಗಿ, ವಿಸ್ಮಯದಿಂದ ವಿಸ್ಫಾರಿತವಾಗಿ, ಸ್ನೇಹದಿಂದ ಸ್ನಿಗ್ಧವಾಗಿ, ನಿರ್ವೇದದಿಂದ ನಿಮೀಲಿತವಾಗಿ, ಭಯದಿಂದ ತಲ್ಲಣಗೊಂಡು, ಲಜ್ಜೆಯಿಂದ ಮುಗ್ಧವಾದ, ಮನೋಹರವಾದ, ಹುಡುಗಿಯೊಬ್ಬಳ ನಯನಗಳವು. ಆತನ ಬಾಳ ಬೆಳಕಾದ ಲಲಿತೆಯವು. ಆ ಕಣ್ಣುಗಳ ಒಂದೊಂದು ಭಾವವೂ ಆತನ ಹೃದಯದಲ್ಲಿ ಹರ್ಷವಿಷಾದಗಳ ತುಮುಲವನ್ನೆಬ್ಬಿಸಿದೆ. ಮುರಲಿಯ ಮುಖಾರಿಯೂ ಈ ಹರ್ಷಖೇದಗಳಿಗೇ ನುಡಿಗೊಡುತ್ತಿರುವುದು. ತಾನು ಲಲಿತೆಯೊಡನೆ ಸಂಸಾರಮಾಡುವ ಸ್ವರ್ಗೀಯ ಸುಖದ, ಅವಳನ್ನಗಲಿದರೆ ತನ್ನ ಬಾಳಿನಲ್ಲಿ ಕಾಣುವ ಅಗಾಧವಾದ ಶೂನ್ಯದ ಸಾಕ್ಷಾತ್ಕಾರವನ್ನು ಈ ಕೊಳಲುಲಿವು ಆತನಲ್ಲಿ ಉಂಟುಮಾಡುತ್ತಿದೆ. ಎಂತಹ ಅನುಭವವದು? ಒಂದು ಕ್ಷಣದಲ್ಲಿ ನಂದನವನದ ಉಪಭೋಗವನ್ನುಂಡು ಅದರ ಸವಿ ಇನ್ನೂ ಅಳಿಯದಿರುವಷ್ಟರಲ್ಲಿಯೇ ಮರುಕ್ಷಣದಲ್ಲಿ ರೌರವಕ್ಕೆ ಉರುಳುವುದು! ಕೊಳಲು ತೋರುತ್ತಿರುವ ಸುಖದಿಂದ ಆ ಕೊಳಲೇ ತೋರುವ ತೀಕ್ಷ್ಣ ಯಾತನೆ ಎಷ್ಟು ಘೋರವಾಗಿ ಮಾಡಲ್ಪಟ್ಟಿದೆ! ಒಂದು ದಿನದಲ್ಲಿ — ಕೆಲವು ಗಳಿಗೆಗಳಲ್ಲಿ — ತನ್ನ ಹೃದಯಕ್ಕೆ ಬೆಳಕಿನಂತಿದ್ದ ಪ್ರೇಮ ಅದನ್ನೇ ದಹಿಸಲಾರಂಭಿಸಿದ ಕಥೆಯದು.

ಅಂದು, ತನ್ನ ಬಯಕೆಯ ಬಳ್ಳಿಗೆ ಕೊಡಲಿಯ ಮೊದಲ ಪೆಟ್ಟು ಬಿದ್ದ ದಿನ, ಅಂದಿಗೆ ಹದಿನೈದು ದಿನಗಳ ಹಿಂದೆ, ಅವನೂ ಶ್ರೀನಿವಾಸನೂ ಇದ್ದುದು ತಮ್ಮೂರಿನಲ್ಲಿ. ಅದು ಲಲಿತೆಯ ಊರೂ ಹೌದು. ಮುಖಾರಿ ನುಡಿಯುತ್ತಿರುವ ಸೌಂದರ್ಯಗಳಿಗೆಲ್ಲಾ ತೌರೂರೂ ಅದೇ. ಶಿಶಿರಋತುವಿನ ಅಂತ್ಯಕಾಲ. ಮಲ್ಲಿಗೆಯಲ್ಲಿ ಮುಗುಳು ತಲೆದೋರಿ ಮಧುವಿನ ಬೀಗವನ್ನು ತೆರೆಯುವ ಕಾಲ. ಅಂದಿನ ಸಂಜೆ ತಾನೆ ಎಷ್ಟು ಮನೋಹರವಾಗಿತ್ತು. ತಮ್ಮೂರಿನ ಸಂಜೆ ಯಾವಾಗಲೂ ಸುಂದರವೇ, ನಿಜ. ಸುತ್ತಲೂ ಹಬ್ಬಿರುವ ಗಿರಿಶಿಖರಗಳು ತನಗಿತ್ತ, ತನ್ನದೇ ಆದ, ಪುಟ್ಟ ಆಕಾಶದಲ್ಲಿ ಕಾಮು

ರೂಪಿಯಾಗಿ ಅಲಸಿಕೆಯಿಂದ ತೇಲುವ ಮುಗಿಲ ತಿಳಿಬಣ್ಣದ ಸೀರೆಯುಟ್ಟ ಸಂಜೆ ಮನೋಹರಳಲ್ಲವೇ? ಆದರೆ ಅಂದಿನ ಸಂಜೆಯ ರಮ್ಯತೆ ಅನುಪಮ ವಾದದ್ದು. ಅದರ ಅಪೂರ್ವಕಾಂತಿ ಲಲಿತೆಯನ್ನು ಚುಂಬಿಸಿದಾಗ ಅವಳು ವಿಹಾರಾರ್ಥವಾಗಿ ತಿರೆಗಿಳಿದು ಬಂದ ಅಪ್ಸರೆಯಂತೆ ಹೇಗೆ ಕಂಡು ಬಂದಳು! ಅಂದು ಲಲಿತೆಯೆಷ್ಟು ಚೆಲುವೆ! ಗುಲಾಬಿಯ ಹೂವನ್ನು ಏನು ಸೊಗಸಿನಿಂದ ಮುಡಿದಿದ್ದಳು! ಸೀರೆಯುಟ್ಟ ಸೊಬಗೋ, ಕೊಂಕು ಕೊರಳಿನ ಭಾವವೋ, ಸುಳಿಗುರುಳಿನ ವಿನ್ಯಾಸವೋ, ಎಲ್ಲದಕ್ಕಿಂತಲೂ ಆ ಕಣ್ಣುಗಳೋ! ಇಂತಹ ಸೌಂದರ್ಯವನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಹುಟ್ಟಿದ ಆ ವಿಸ್ಮಯ, ಆ ಪರವಶತೆ, ಮತ್ತು ಆ ಭಯ! ಆ ಮಹದ್ಭಯ!!

ಲಲಿತೆಯದು ಸ್ವರ್ಗೀಯ ಸೌಂದರ್ಯ, ತನಗೂ ಅದಕ್ಕೂ ಎಲ್ಲಿಯ ಸಂಬಂಧ? ಅದನ್ನು ಹೃದಯದಲ್ಲಿ ಬಚ್ಚಿಟ್ಟುಕೊಳ್ಳುವುದಕ್ಕೆ ತಾನು ಅರ್ಹನೆ? ತನಗೆ ಸಾಧ್ಯವೆ? ಅದಕ್ಕಾಶಿಸುವುದು ತಾನೆ ತಪ್ಪಲ್ಲವೆ? ಆದರೆ ಬಯಸದೆ ಇರುವುದು ತಾನೆ ಹೇಗೆ? ಆ ಸೌಂದರ್ಯೋಪಾಸನೆ—ಅದೊಂದೇ ಅಲ್ಲ—ಅವಳ ಬಾಳಿನೊಡನೆ ತನ್ನ ಬಾಳನ್ನು ಬೆರೆಸಬೇಕೆಂಬ ಬಯಕೆ—ಅವಳ ಒಲುಮೆಯ ಉಪಾಸನೆ—ಅದೆ ತನ್ನ ಬಾಳಿನ ಗುರಿ. ಆ ಆಸೆ ಇಂಗಿದ ಮೇಲೆ ತನ್ನ ಬಾಳು ಕೊನೆಗಂಡಂತೆ ತಾನೆ? ತನ್ನ ಜೀವಿತದ ಕೊನೆಯವರೆಗೂ ಹೀಗೆಯೇ ಲಲಿತೆಯನ್ನು ನೋಡುತ್ತ ಕುಳಿತುಬಿಟ್ಟರೆ—ಆಹಾ, ಈ ಗಳಿಗೆ ಅಮೃತವಾಗಿಬಿಟ್ಟರೆ .... ಹೀಗೆ ಮುಗ್ಧನಾಗಿ, ಹರ್ಷಮೂಢನಾಗಿ, ಲಲಿತೆಯನ್ನು ದಿಟ್ಟಿಸಿ ನೋಡುತ್ತಾ ತಾನು ಕುಳಿತುಬಿಟ್ಟಾಗ....

"ರಂಗಾ, ರಂಗಾ....ರಂಗ ಇಲ್ಲಿದಾನೆಯೆ ?"

ಯಾರ ಧ್ವನಿಯದು ? ಶ್ರೀನಿವಾಸನದು. ಶ್ರೀನಿವಾಸನ ಧ್ವನಿಯನ್ನು ಕೇಳಿ ಲಲಿತೆ ಜಗ್ಗನೆದ್ದು ನಿಂತಿದಾಳೆ. ಮೂರ್ತಿವೆತ್ತ ಯೌವನದಂತೆ ಹೊಳೆಯುವ ಅವನ ಸರ್ವಾಂಗ ಸೌಂದರ್ಯ ಅಂದೆ ಅವಳ ಕಣ್ಣಿಗೆ ಮೊದಲು ಬಿದ್ದುದು. ವಿಸ್ಮಯದಿಂದ ಆಕೆಯ ಕಣ್ಣುಗಳು ಅರಳಿವೆ, ನಗೆಯೊಡನೆ ಲಜ್ಜೆ ಬೆರೆದಿದೆ. ಆ ವಿಸ್ಮಯ, ಆ ಮೃದುಹಾಸ, ಆ ಲಜ್ಜೆ, ಶ್ರೀನಿವಾಸ ಅರಿಯದಂತೆ ಅವಳು ಅವನಲ್ಲಿ ನೆಡುವ ದೃಷ್ಟಿಯನ್ನು ಅವಳ ನಾಚಿಕೆ ಹಿಂದಿರುಗಿಸಲು ಹೆಣಗಾಡಿದ ಪ್ರಯತ್ನ, ಇವು ತನ್ನ ಎದೆಯಲ್ಲಿ ಆಲಿಕಲ್ಲೆಸೆ

ದುದು ಅಂದು. ಆ ಗಳಿಗೆಯಲ್ಲೇ ತನ್ನ ಬಾಳು ಕವಲೊಡೆದುದು, ಎದೆಯಲ್ಲಿ ಭಯ ಮೂಡಿದುದು, ನಿರಾಶೆ ಕಿಡಿಗೊಂಡುದು.

ಆಮೇಲೆ, ದಿನದಿನಕ್ಕೆ ಲಲಿತಾ ಶ್ರೀನಿವಾಸರ ಪರಿಚಯ ಸ್ನೇಹಕ್ಕೆ ತಿರುಗಿ ಸಲಿಗೆಗಿಟ್ಟ ಮೇಲೆ, ಶ್ರೀನಿವಾಸನಿಗೆ ಲಲಿತೆಯ ಮನೆಯಲ್ಲಿ ಊಟ ಉಪಚಾರಾದಿಗಳು ನಡೆದು ಬಳಕೆ ಹೆಚ್ಚಾದ ಮೇಲೆ, ಆ ದಿನಗಳನ್ನು ತಾನು ಹೇಗೆ ಕಳೆದನು! ಎಷ್ಟು ಹೃದಯ ವಿದ್ರಾವಕವಾದ ಕಥೆಯದು! ಶಾಂತಿ ನಂದಿ, ಈರ್ಷೆಯ ಭೀಷಣ ಚಂಡಮಾರುತನೆದ್ದು ಸಿಡಿಲುಗುಡುಗಿನಾರ್ಭಟ ದಿಂದ ತನ್ನೆದೆ ತಲ್ಲಣಿಸಿದ ದಿನಗಳವು. ಸ್ವಾರ್ಥ ನಿಃಸ್ವಾರ್ಥಗಳ, ಆಶೆ ನಿರಾಶೆ ಗಳ, ರಾಗತ್ಯಾಗಗಳ ತುಮುಲದಲ್ಲಿ ಯಾತನೆಗೊಂಡು ದೇವನಿಗೆ ಮೊರೆಯಿಟ್ಟ ದಿನಗಳವು. ಆ ಭಾವನೆಗಳಿಗೆಂತು ಇಂದು ಮಂದ್ರಸ್ಥಾಯಿಯಲ್ಲಿ ಸಂಚರಿಸುವ ಕಲ್ಯಾಣಿ ನುಡಿಗೊಡುತ್ತಿದೆ!

* * *

ಶ್ರೀನಿವಾಸನನ್ನು ತಮ್ಮೂರಿಗೆ ಆಹ್ವಾನಿಸಿದ್ದು ತಪ್ಪೆ? ಆಮೇಲೆ ಲಲಿತ ಯೊಡನೆ ಅವನ ಕೆಳೆ ಬೆಳೆಯುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟದ್ದೊ? ತಪ್ಪಲ್ಲದೆ ಮತ್ತೇನು? ತನ್ನ ಬಾಳ ಬೆಳಕನ್ನು ಹೆರರಾರೋ ಕದ್ದುಕೊಂಡು ಹೋಗುವುದಕ್ಕೆ ಅವಕಾಶವನ್ನು ಕೊಟ್ಟದ್ದು ತಪ್ಪಲ್ಲವೆ? ಔದಾರ್ಯವಂತೆ ಔದಾರ್ಯ; ಆತ್ಮನಾಶ ಔದಾರ್ಯವೆ? ತಿಳಿದೂ ತಿಳಿದೂ ತಾನು ಶೀನುವನ್ನು ತಮ್ಮೂರಿಗೆ ಕರೆದುಕೊಂಡು ಬಂದುದು ಶುದ್ಧಮುಟ್ಠಾಳತನ. ನೋಡುವವರ ಕಣ್ಮನಗಳನ್ನು ಸೆರೆಗೊಳ್ಳುವುದು ಶೀನುವಿನ ಹುಟ್ಟುವಿದ್ಯೆ. ಮನ್ಮಥನಂತೆ ರೂಪವುಳ್ಳವನು, ತೇಜಸ್ವಿ, ಸಚ್ಛೀಲ, ಚಲಿಸುವ ಸೂರ್ಯಕಿರಣದಂತೆ ಇದ್ದಾನೆ. ಈತನನ್ನಾರು ಪ್ರೀತಿಸರು? ತನ್ನ ಹಾಗೆ ತಾನೆ ಲಲಿತೆಯೂ ಕೂಡ....

* * *

ನಿಜ, ತನಗಿಂತಲೂ ಶ್ರೀನಿವಾಸ ಲಲಿತೆಗೆ ಶ್ರೇಷ್ಠನಾದ ವರ, ಅವ ಳನ್ನು ತನಗಿಂತಲೂ ಹೆಚ್ಚು ಸುಖವಾಗಿ ಇಟ್ಟುಕೊಳ್ಳುವುದರಲ್ಲಿ ಸಂಶಯ ವಿಲ್ಲ. ಸುಖಜೀವನ ಅವನ ಜನ್ಮಸಿದ್ಧವಾದ ಹಕ್ಕು. ಲಲಿತೆಯಲ್ಲಿ ತನಗೇಕೆ ಆಸೆ? ಅವಳ ಸುಖಕ್ಕೆ ಅಡ್ಡಿ ಬಂದು ತನ್ನ ಸ್ವಾರ್ಥವನ್ನು ಗಳಿಸಿಕೊಳ್ಳುವುದು

ಪ್ರೇಮವೆ? ಅದು ಆಸೆ. ಆದರೆ ಎಂತಹ ಆಸೆ! ಆ ಆಸೆ ಇಂಗಿದ ಮೇಲೆ, ಲಲಿತೆ ಕೈಬಿಟ್ಟು ಹೋದ ಮೇಲೆ, ತಾನು ಅಷ್ಟು ದಿನದಿಂದ ಕಟ್ಟಿದ ಸ್ವರ್ಗ ಉರುಳಿಹೋದ ಮೇಲೆ, ನಚ್ಚಳಿದ ಮೇಲೆ—ಆ ಉರಿ, ಆ ಕತ್ತಲೆ!—

* * *

ಲಲಿತೆ ಇನ್ನೂ ಹುಡುಗಿ. ಪ್ರೇಮದ ಸ್ವರೂಪವನ್ನು ತಿಳಿಯಬಲ್ಲಳೆ? ತಾನು ಅವಳನ್ನು ಇಷ್ಟೊಂದು ಪ್ರೀತಿಸುತ್ತಿರುವ ಅರಿವಾದರೂ ಅವಳಿಗಿದೆಯೆ? ಇರಲಾರದು. ಅವಳು ತನ್ನಲ್ಲಿಟ್ಟಿರುವುದು ಭ್ರಾತೃಸ್ನೇಹ, ಅಷ್ಟೆ. ಪ್ರಣಯಕ್ಕಿಂತಲೂ ಭಕ್ತಿ ಗೌರವಗಳು ಹೆಚ್ಚು. ಆಗಾಗ ಅವಳ ತಾಯಿ ತಂದೆಗಳು ಹೇಳುವುದರಿಂದಲೋ ಏನೋ, ಈಚೀಚೆಗೆ ಸ್ವಲ್ಪ ನಾಚಿಕೆ ಹುಟ್ಟಿದೆ. ಆದರೆ ಪ್ರಣಯದ ದೌತ್ಯವಿಲ್ಲ ಆ ಲಜ್ಜೆಯಲ್ಲಿ. ಅವಳ ತಾಯಿತಂದೆಗಳಿಗೂ ತನ್ನನ್ನು ಕಂಡರೆ ಮಗನಂತೆ ಅಭಿಮಾನ. ಅಳಿಯನೆಂದೊ? ಒಂದು ಕಾಲದಲ್ಲಿ ಇದ್ದಿದ್ದರೂ ಇದ್ದಿರಬಹುದು. ಒಂದೇ ಊರಿನವರು, ತಾನೇನೂ ಕುರೂಪಿಯಲ್ಲ, ಅವಿದ್ಯಾವಂತನಲ್ಲ, ಕುಲಹೀನನಲ್ಲ. ಅವರಿಗೂ ಒಬ್ಬಳೇ ಮಗಳು. ಹೆರರೂರಿಗೆ ಕಳಿಸಲು ಇಷ್ಟಪಡದೆ ತನಗೆ ಕೊಡಬೇಕೆಂದೂ ಇದ್ದಿರಬಹುದು. ಆ ಸಮಾಚಾರವೂ ಸ್ವಲ್ಪ ಇತ್ತು. ಆದರೆ, ಶ್ರೀನಿವಾಸ!—ಅವನನ್ನು ನೋಡಿದ ಮೇಲೆ ಅವರಿಗಿದ್ದ ಈ ಭಾವನೆ ಚೆದರಿಹೋಗಿರಬೇಕು. ನ್ಯಾಯವಾದದ್ದು ತಾನೆ. ತಾನು ಇಂತಹ ರತ್ನವನ್ನು ಧರಿಸಲು ಅರ್ಹನಲ್ಲ. ಆದನೂ ಅದರಲ್ಲೇಕೆ ಬಯಕೆ? ಇನ್ನು ತಾನು ಲಲಿತೆಯ ಆಸೆಯನ್ನು ಬಿಡುವ ಯತ್ನ ಮಾಡಬೇಕು. ಆ ಆಸೆ ಬಿಡಲು ಸಾಧ್ಯವೆ? ಎಂತಹ ನಚ್ಚದು! ಲಲಿತೆಯೊಂದಿಗೆ ಜೀವಿಸುವುದು, ಸಂಸಾರಮಾಡುವುದು, ಅವಳು ಎಳೆದ ಉಸಿರನ್ನು ತಾನೆಳೆಯುವುದು, ಅವಳಟ್ಟ ಊಟವನ್ನು ತಾನು ಉಣುವುದು, ಅವಳಿರುವ ನೆಳಲಲ್ಲಿ ತಾನಿರುವುದು, ಅವಳೊಡನೆ ತಾನು ನಗುವುದು, ಅವಳ ಕಂಬನಿಯಲ್ಲಿ ತನ್ನದನ್ನು ಬೆರೆಸುವುದು, ಎಂತಹ ಸ್ವರ್ಗ! ಅವಳೊಡನೆ ಎಲ್ಲಿದ್ದರೂ ಸ್ವರ್ಗವೆ. ಆದರೆ ಅವಳೊಡನೆ ತಮ್ಮೂರಿನಲ್ಲಿ ವಾಸಮಾಡುವುದು ಎಂತಹ ನಚ್ಚದು! ಆ ನಚ್ಚಳಿದ ಮೇಲೆ ತಾನು ಉಸಿರೆಳೆಯಬೇಕೆ? ಅಯ್ಯೋ, ತನಗೇಕೆ ಲಲಿತೆಯ ಮೇಲೆ ಪ್ರೀತಿ ಹುಟ್ಟಿತು!

ನಿಜ, ಲಲಿತಾ ಶ್ರೀನಿವಾಸರ ಅನುರಾಗ ಪರಸ್ಪರವಾದುದು. ಶೀನು

ವಿಗೂ ಲಲಿತೆಯ ಮೇಲೆ ಆಸೆ ಹುಟ್ಟಿರಬೇಕು. ಇಲ್ಲದಿದ್ದರೆ ಅವಳ ಪೂರ್ವಾಪರದಲ್ಲಿ ಅವನಿಗೇಕೆ ಇಷ್ಟು ಮಮತೆ? ಆವಳ ಗುಣವರ್ಣನವನ್ನು ಕೇಳುವದರಲ್ಲಿ ಅವನಿಗೇಕೆ ಉತ್ಸಾಹ? ಅವಳನ್ನು ಕಂಡರೆ ಅವನಿಗೇನೋ ನಾಚಿಕೆ. ಅವಳೊಂದಿಗೆ ಮಾತನಾಡುವುದಕ್ಕೂ ಸಂಕೋಚ. ಲಲಿತೆಗೂ ಹಾಗೆಯೆ. ಅದು ಪ್ರಣಯದ ಕುರುಹು. ಹೌದು, ಅವರ ಪ್ರಣಯ ಪರಸ್ಪರವಾದುದು.

* * *

ಪಾಪ, ಶ್ರೀನಿವಾಸನಿಗೆ ತನ್ನೊಲುಮೆಯ ವಿಷಯ ಗೊತ್ತಿರಲಾರದು. ಯಾರಿಗೆ ತಾನೆ ಗೊತ್ತು? ತಾನು ಅವನಿಗೆ ಹೇಳಿಬಿಟ್ಟರೆ? ತನ್ನನ್ನು ಕಂಡರೆ ಅವನಿಗೆ ನಿಜವಾದ ಪ್ರೇಮವಿದೆ. ತನ್ನ ಬಾಳ ಬೆಳಕನ್ನು ಕದಿಯುವುದಕ್ಕೆ ಅವನ ಮನವೊಡಂಬಡಲಾರದು. ಲಲಿತೆಯನ್ನು ತನಗೆ ಬಿಟ್ಟುಕೊಟ್ಟಾನು. ತನ್ನ ನಚ್ಚಿನ ಸ್ವರ್ಗ ತನಗೆ ಉಳಿದೀತು. ತನ್ನೊಲುಮೆಯನ್ನು ಆತನಿಗೆ ತಿಳಿಸಿಬಿಡುವುದು ಉತ್ತಮವಲ್ಲವೆ?

* * *

ಹ್ಞ! ಇತರರಿಂದಲೇ ತನಗೆ ಲಲಿತೆಯ ಭಿಕ್ಷೆ! ಶ್ರೀನಿವಾಸನಿಂದಲೆ? ತನ್ನ ಪ್ರೇಮ ಅಷ್ಟು ತುಚ್ಛವಾದುದೆ? ಅವನು ಬಿಟ್ಟುಕೊಟ್ಟರೂ ಅವಳು ತನ್ನವಳಾಗುವಳೆಂಬುದರಲ್ಲಿ ನಿರ್ಣಯವೇನು? ಅವಳು ತನ್ನವಳಾದರೂ ಅವಳೊಲುಮೆ ತನ್ನದಾಗುತ್ತದೆಯೆ? ತನಗೆ ಲಲಿತೆ ಬೇಕಿಲ್ಲ; ಅವಳೊಲುಮೆ ಬೇಕು. ಆ ಒಲುಮೆ ವಿನಿಯೋಗವಾಗಿ ಬಿಟ್ಟಿದೆ. ಅದು ಅವಳ ಅಧೀನದಲ್ಲಿಲ್ಲ. ಅವರವರ ಒಲುಮೆ ಅವರವರ ಹಿಡಿತದಲ್ಲಿದ್ದು ಬಿಟ್ಟಿದ್ದರೆ ಪ್ರಪಂಚದಲ್ಲಿ ಇಷ್ಟೊಂದು ಕಂಬನಿ ಇರುತ್ತಿತ್ತೇನು? ಮತ್ತು, ಶ್ರೀನಿವಾಸನನ್ನು ಅವಳು ಕಳೆದುಕೊಂಡರೆ ಅವಳಿಗೆ, ತಾನು ಅವಳನ್ನು ಕಳೆದುಕೊಂಡಷ್ಟು ದುಃಖವಾಗಬಹುದು. ಪಾಪ, ಹೆಂಗಸು ಸೈರಿಸಲಾರಳು. ತಾನು ಗಂಡಸು; ತನಗೆ ಎಷ್ಟು ಕಷ್ಟವಾದರೂ ಆಕೆಯ ಸುಖಕ್ಕೆ ಅಡ್ಡಬರಲಾಗದು. ಈಗಿನಿಂದಲೂ ತಾನು ಅವಳನ್ನು ಮರೆಯುವ ಪ್ರಯತ್ನ ಮಾಡಬೇಕು. ಅಯ್ಯೋ, ತಾನೇಕೆ ಲಲಿತೆಯನ್ನು ಪ್ರೀತಿಸಿದುದು? ಅವಳನ್ನಗಲಿದ ಮೇಲೆ, ಆ ಉರಿ, ಆ ಸಂಕಟ, ಆ ಅನಿರ್ವಚನೀಯವಾದ ಯಾತನೆ! "ಇರಿತಗಳನು ತಾಳದವರಿಗೊಲುಮೆ ಗೊಡವೆಯೇತಕೆ?"

ಉಹು. ತನ್ನ ಹೃದಯ ವಿದೀರ್ಣವಾದರೂ ಅವಳ ಸುಖಕ್ಕೆ ತಾನು ಅಡ್ಡಿ ಬರಲಾರ. ಲಲಿತೆಯ ಹೃದಯದ ಹೊಸಲಿನೆಡೆಯಲ್ಲಿ ಪ್ರೇಮ ಭಿಕ್ಷೆಗೆ ಆರ್ತನಾಗಿ ನಿಲ್ಲುವುದು ಮಾತ್ರ ತನ್ನ ಕೆಲಸ. ಒಳಕ್ಕೆ ಕರೆದುಕೊಳ್ಳು ವುದೂ ಬಿಡುವುದೂ ಅವಳಿಗೆ ಸೇರಿದುದು. ಆ ಕವಾಟವನ್ನು ಭೇದಿಸಿ ಒಳ ಹೊಗಲು ಅಲ್ಲಿ ತಾನು ಶೂನ್ಯವನ್ನು ಕಾಣಬಹುದು. ಬಾಗಿಲಲ್ಲೇ ಸಮಾಧಿ ಯನ್ನೈದಿದರೂ ಸರಿಯೆ, ಅಲ್ಲಿ ನಿಲ್ಲುವುದು ತನ್ನ ಧರ್ಮ; ಉಳಿದುದು ಲಲಿ ತೆಗೆ ಸೇರಿದುದು. ಬಾಗಿಲು ಎಂದಾದರೂ ಒಂದು ದಿನ ತೆರೆಯುವುದೆಂಬ ನಚ್ಚು ಶ್ರೀನಿವಾಸನು ಬಂದು ಕದವನ್ನು ತಟ್ಟುವವರೆಗೂ ಇತ್ತು. ಈಗ ಆ ನಚ್ಚು ನಂದಿತು. ಇನ್ನು ತನ್ನ ಕರ್ತವ್ಯವೇನು? ಅವರ ಪ್ರಣಯದ ದೌತ್ಯ ವನ್ನು ಮಾಡುವುದು; ಹ ಹ್ಹಾ, ಅವರ ಪ್ರಣಯದ ದೌತ್ಯವನ್ನು ಮಾಡು ವುದು; ಎದೆಯ ಕಾಡುಗಿಚ್ಚಿಗೆ ಹುಸಿನಗೆಯ ಬೆಳುದಿಂಗಳನ್ನು ಹೊದಿಸು ವುದು, ಅವರಿಬ್ಬರ ಮೈತ್ರಿ ಬೆಳೆಯುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಡು ವುದು. ಆಮೇಲೆ, ಅವರ ವಿವಾಹವಾದ ಮೇಲೆ-ತನಗೇನು, ಬಂಧುವಿಲ್ಲ, ಬಳಗವಿಲ್ಲ, ಇದ್ದ ಆಸ್ತಿ ತನ್ನ ತಂಗಿಗಾಗುತ್ತದೆ—ತಾನು ಕಾವಿಯುಟ್ಟು ದೇಶ ದೇಶ ತಿರುಗಿ ಲಲಿತೆಯನ್ನು ಮರೆಯಲು ಯತ್ನಿಸುವುದು. ಅದು ಸಾಧ್ಯವಾಗಲಾರದು, ನಿಜ. ಆಮೇಲೆ, ಎಂದಾದರೊಂದು ದಿನ ಹಿಂದಿರುಗಿ ಲಲಿತೆಯ ಮಗುವನ್ನು ಒಂದು ಸಲ ಮುದ್ದಿಡುವುದು. ಆಮೇಲೆ—ಆಮೇಲೆ —ಏನು ಭಯಂಕರವಾದ ತ್ಯಾಗವಿದು! ಈ ತ್ಯಾಗದಲ್ಲೂ ಒಂದು ಅನಿ ರ್ವಚನೀಯವಾದ ಸುಖವಿದೆ—ಆಮೇಲೆ—ಸಂಜೀವರಾಯರ ಸಾರಮತಿ ರಾಗ ಎಂತಹ ಶಾಂತಿಯನ್ನು ತುಂಬುತ್ತಿದೆ! ಅದು ತಾರದಲ್ಲಿ ಸಂಚರಿಸಿ, ಬಳಲಿ, ಹೇಗೆ ಮೆಲ್ಲನೆ, ಬಲು ಮೆಲ್ಲನೆ, ಶ್ರುತಿಯಲ್ಲಿ ಲೀನವಾಗುತ್ತಿದೆ! ಆಹಾ! ಏನು ದೈನ್ಯ! ಏನು ಸುಖ! ಏನು ಶಾಂತಿ!....ಆಮೇಲೆ....

ರಂಗರಾಯನ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯು ತ್ತಿದೆ. ಸಭೆ ಕರತಾಡನ ಮಾಡುತ್ತಿದೆ. ಇದನ್ನು ಕಂಡು ಶ್ರೀನಿವಾಸ ರಾಯ "ಇದೇನಯ್ಯಾ ಕಣ್ಣೀರು? ಸಭೆ ಆನಂದದಿಂದ ಚಪ್ಪಾಳೆ ತಟ್ಟು ವಾಗ ನಿನಗೇನಯ್ಯಾ ಕೇಡು? ನಿಮ್ಮಪ್ಪನನ್ನೋ ನಿಮ್ಮಮ್ಮನನ್ನೋ ನೆನೆದುಕೊಂಡೆಯಾ?" ಎಂದು ಕೇಳಿದುದಕ್ಕೆ ರಂಗರಾಯ "ಈ ರಾಗ

ಅಂಥದಯ್ಯಾ, ಅದರ ಅಭಿನಂದನದ ಆನಂದಬಾಷ್ಪ ಇದು" ಎಂದನು.

* * *

ಸಂಗೀತ ಮುಗಿದ ಮೇಲೆ ಮನೆಗೆ ಹೋಗುವಾಗ ರಂಗ: "ಶೀನು, ಬೇಸಗೆಗೆ ನಮ್ಮೂರಿಗೇ ಬಂದುಬಿಡಯ್ಯ, ನಮ್ಮ ಮನೆ ಬಿಡುಬೀಸಾಗಿದೆ. ಸ್ವಲ್ಪಕಾಲ ಸುಖವಾಗಿರೋಣ" ಎಂದುದಕ್ಕೆ ಶ್ರೀನಿವಾಸರಾಯ "ಓಹೋ ಅದಕ್ಕೇನಯ್ಯಾ, ಸಂಭ್ರಮವಾಗಿ. ಕರೆಯದೇ ಬರಬೇಕೆಂದಿದ್ದವನು ಕರೆದರೆಬಿಟ್ಟೇನೆ? ಆದರಲ್ಲೂ ನಿಮ್ಮೂರಿಗೆ, ನಿಮ್ಮ ಮನೆಗೆ" ಎಂದು ನಕ್ಕನು.

(೨)

ಹತ್ತು ವರುಷಗಳು ಸಂದವು.

ಶಂಕರಯ್ಯನವರ ಹಜಾರದಲ್ಲಿ ಒಬ್ಬ ಪ್ರಸಿದ್ಧ ಗಾಯಕನ ಗೋಟು ವಾದ್ಯದ ವಿನಿಕೆಯನ್ನು ಕೇಳುವುದಕ್ಕೆ ಬೆಂಗಳೂರಿನ ರಸಿಕರು ತಿರುಗಿ ನೆರೆದಿದ್ದಾರೆ. ಕುರ್ಚಿಯ ಮೇಲೆ ಉನ್ನತಸ್ಥಾನದಲ್ಲಿ ಶ್ರೀನಿವಾಸರಾಯ ಕುಳಿತಿದಾನೆ. ಅವನ ಮುಖದಲ್ಲಿ ಅದೇ ಉಲ್ಲಾಸ, ಅದೇ ನಗೆ, ಅದೇ ಯೌವನದ ಸಿರಿ. ಉನ್ನತ ಪದವಿಯೂ ಐಹಿಕ ಸೌಖ್ಯವೂ ಅವನ ಮುಖದ ಕಳೆಯನ್ನು ಇಮ್ಮಡಿಸಿವೆ.

ಅವನ ತೊಡೆಯ ಮೇಲೆ ಒಂದು ಮಗು ಕುಳಿತಿದೆ. ಅವನಂತೆಯೆ ಮುಖ, ಕೆನ್ನೆ, ಗಲ್ಲ. ಆದರೆ ಕಂಗಳೆರಡು ಲಲಿತೆಯವನ್ನು ಹೋಲುತ್ತಿವೆ. ಅವರ ಮಗುವದು. ಮಗುವಿನ ಹೆಸರು ಆನಂದ. ಆ ಹುಡುಗನನ್ನು ಮುದ್ದಿಟ್ಟ ಅವರ ಸ್ನೇಹಿತರು, ಮಗುವಿಗೆ ಅನ್ವರ್ಥವಾದ ಹೆಸರಿಟ್ಟಿದ್ದಾರೆ ಎನ್ನುತ್ತಿದ್ದರು.

ಲಲಿತೆಯೂ ಸ್ತ್ರೀ ಸಮೂಹದಲ್ಲಿ ಕುಳಿತಿದಾಳೆ. ಯೌವನದ ಉನ್ನತಿಯಲ್ಲಿ ಅವಳ ರೂಪ ಉಜ್ವಲವಾಗಿದೆ. ಮುಖದಲ್ಲಿ ವಿಷಾದದ ಒಂದು ರೇಷೆಯೂ ಇಲ್ಲ. ಎಲ್ಲೆಲ್ಲೂ—ಕಣ್ಣು, ಬಾಯಿ, ತುಟಿ, ಕೆನ್ನೆ—ಎಲ್ಲೆಲ್ಲೂ ನಗೆ ತುಂಬಿ ತುಳುಕುತ್ತಿದೆ. ಇಂಥ ಗಂಡ, ಇಂಥ ಮಗು. ಅವಳ ಬಾಳಿನಲ್ಲಿ ನಗೆಗಲ್ಲದೆ ಮತ್ತಾವುದಕ್ಕೆ ಅವಕಾಶ?

ಆದರೆ ರಂಗನೆಲ್ಲಿ? ಅದೋ, ಆ ಕಂಬದ ಮರೆಯಲ್ಲಿ ಕುಳಿತಿರುವ

ಸನ್ಯಾಸಿಯ ಮುಖದ ಛಾಯೆ ಆತನ ಹಾಗೆ ಇದೆ. ಆದರೆ ಇದೇನು? ಅಸ್ಥಿ ಪಂಜರಕ್ಕೆ ಚರ್ಮವನ್ನು ಹೊದೆಸಿದ ಹಾಗೆ, ಹಕ್ಕಿಗಳನ್ನು ಬೆದರಿಸಲು ಕಣ ದಲ್ಲಿ ನೆಡುವ ಕೋಲು ಮನುಷ್ಯನ ಹಾಗೆ.

ವಿನಕೆಗಾರಂಭವಾಯಿತು. ಎರಡು ಕೀರ್ತನೆಗಳನ್ನು ಬಾರಿಸಿ ಗಾಯ ಕರು ವಸಂತರಾಗದ ಆಲಾಪನೆಗೆ ತೊಡಗಿದ್ದಾರೆ. ಶ್ರೀನಿವಾಸನ ತೊಡೆ ಯನ್ನಿಳಿದು ಆನಂದ ತಾಯ ಬಳಿಗೆ ಹೋಗುವುದಕ್ಕೆ ಜನ ಸಂದಣಿ ಯಲ್ಲಿ ನುಸಿಯುತ್ತಿದ್ದಾನೆ. ಒಬ್ಬರ ತೊಡೆಯ ಮೇಲೆ ಕಾಲು, ಇನ್ನೊಬ್ಬರ ತಲೆಯ ಮೇಲೆ ಕೈ, ಹೀಗೆ ತತ್ತರಿಸಿ, ಮಧ್ಯೆ ಮಧ್ಯೆ ಬಿದ್ದೇಳುತ್ತಾ, ನಗುತ್ತ ನೆಲಕ್ಕೆ ಬಿದ್ದ ಪಾದರಸದಂತೆ ನಡೆಯುತ್ತಿದಾನೆ. ಜನರಿಗೆ ಇವನ ನಡೆವಳಿಕೆ ಯಿಂದ ಉಲ್ಲಾಸ ಹೆಚ್ಚುತ್ತಿದೆ. ತಂದೆತಾಯಿಗಳ ಕಣ್ಣುಗಳು ಕಾತರತೆ ಯಿಂದಲೂ ಆನಂದದಿಂದಲೂ ಕಂದನನ್ನು ನೋಡುತ್ತಿವೆ. ಮತ್ತು ಒಮ್ಮೆ ಗೊಮ್ಮೆ ಒಂದಕ್ಕೊಂದು ಮಸೆದು, ಸೋತು, ಹಿಂತಿರುಗಿ ಅವರವರ ಮುಖ ದಲ್ಲಿ ಪರಾಜಯದ ಲಜ್ಜೆಯ ನಗೆಯನ್ನು ಹರಡುತ್ತಿವೆ. ಆ ಮುಗುಳು ನಗೆ ಅವರಿಬ್ಬರ ಪರಸ್ಪರ ಪ್ರೇಮವನ್ನು ಹೇಗೆ ತೋರುತ್ತಿತ್ತು!

ಸನ್ಯಾಸಿ ಮಗುವನ್ನು ಉತ್ಸುಕತೆಯಿಂದಲೂ ದೈನ್ಯದಿಂದಲೂ ನೋಡುತ್ತಿದ್ದಾನೆ. ಕಣ್ಣುಗಳು ದ್ರವಿಸಿವೆ. ಆತನ ಬಾಳಿನ ಅಂಧಕಾರದಲ್ಲಿ ಮಿಂಚೊಂಮ ಹೊಳೆದು ಅಲ್ಲಿ ಅಂದಿನವರೆಗೂ ಕಾಣದೆ ಇದ್ದ ಸುಖಗಳ ನ್ನೆಲ್ಲಾ ಇಂದು ತೋರಿಸುತ್ತಿದೆ.

ಅಂಥ ಮಗು ತನಗೂ ಇರಬಹುದಾಗಿತ್ತು.

ಆಹಾ! ವಸಂತರಾಗದಲ್ಲಿ ಎಷ್ಟು ದೈನ್ಯ ತುಂಬಿದೆ! ಆತನ ಹೃದಯದ ಶೋಕವನ್ನು ವೊಗೆವ ಪಾತ್ರೆಯೇನೋ ಈ ರಾಗ!

ಮಗು ಸನ್ಯಾಸಿಯ ಹತ್ತಿರಕ್ಕೆ ಬರುತ್ತಾ ಇದೆ. ಕೊನೆಗೆ ಅವನ ತಲೆಯ ಮೇಲೆ ಕೈಯನ್ನೂ, ತೊಡೆಯ ಮೇಲೆ ಕಾಲನ್ನೂ, ಇಡುತ್ತಿದೆ. ಏನು ಕೋಮಲವಾದ ಹಸ್ತಪಾದಗಳವು. ಆಮೇಲೆ ಮುಂದೆ ಹೊರಡಲನು ವಾಗಿ ಆತನ ಮುಖದ ಹತ್ತಿರಕ್ಕೆ ತನ್ನ ಕೈಯನ್ನು ತರುತ್ತದೆ. ಥಟ್ಟನೆ ಆತ ಆ ಕೈಗಳನ್ನು ಹಿಡಿದು ಅಮುಕುತ್ತಾನೆ. ಮಗುವನ್ನು ಮೃದುವಾಗಿ ಆಲಿಂಗಿಸಿ ಮೇಲಕ್ಕೆತ್ತಿ ಅತ್ತೆಡೆ ಇಳಿಸುತ್ತಾನೆ. ಮಗು ವಿಸ್ಮಯದಿಂದ

ಈತನನ್ನು ನೋಡಿ, ನಕ್ಕು ಕೈ ಎಳೆದುಕೊಂಡು ಓಡಿ ಹೋಗುತ್ತದೆ. ಸನ್ಯಾಸಿಯ ಕಂಗಳು ಮಾತ್ರ ಅಶ್ರುವಿನಿಂದ ತೊಯ್ಯುತ್ತಿವೆ.

* * *

ರಾಗಾಲಾಪನೆ ಮುಗಿಯಿತು. ಹತ್ತಿರದಲ್ಲಿ ಕುಳಿತಿದ್ದ ಕೆಲ ಜನರು "ನೋಡಯ್ಯಾ, ಆ ರಾಮಕೃಷ್ಣಮಠದ ಸನ್ಯಾಸಿಯನ್ನ, ಮನುಷ್ಯನ ಅಂತಃಕರಣ ಅಷ್ಟು ಕೋಮಲವಾಗಿರಬೇಕಯ್ಯ. ವಸಂತರಾಗವನ್ನು ಕೇಳಿ ಆತನ ಹೃದಯ ಹೇಗೆ ಕರಗಿ ನೀರಾಗಿ ಹರಿಯುತ್ತಿದೆ ನೋಡು" ಎಂದು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿದ್ದರು. ಆ ಅಭಿನಂದನವನ್ನು ಕೇಳಿ ಸನ್ಯಾಸಿಯ ತುಟಿಗಳಲ್ಲಿ ಹುಸಿನಗೆಯೊಂದು ಸುಳಿದು ಕಂಬನಿಯಲ್ಲಿ ವಿಾಯುತ್ತಿದ್ದಿತು.

# ಮೂರ್ತಿಯ ಹುಡುಗಾಟ

ಮೂರ್ತಿಯೂ ನಾನೂ ಪ್ರಾಣಸ್ನೇಹಿತರು. ನಮ್ಮ ಸ್ನೇಹವೆಂದರೆ ಮನುಷ್ಯನ ಅಳತೆಗೆ ಸಿಕ್ಕುವಂತಹುದಲ್ಲ. ಜಾತಿ ಮತ ಕುಲಗೋತ್ರಗಳೆಲ್ಲಾ ಜಾರಿಹೋಗಿ ನಿರ್ವಾಣವಾದ ಆತ್ಮಗಳೆರಡು ಒಂದಕ್ಕೊಂದಕ್ಕೆ ಗಂಟುಬಿದ್ದ ಸಂಬಂಧವೆಮ್ಮದು. ನಾನು ಶ್ರೀವೈಷ್ಣವ, ಅವನು ಸ್ಮಾರ್ತ; ಆದರೇನು?

ಒಂದು ದಿನ ಮೂರ್ತಿ "ನನ್ನ ತಂಗೀನ ಮದುವೆಯಾಗುತ್ತೀಯೇನಯ್ಯ?" ಎಂದ. ಪ್ರಶ್ನೆ ಅಸಂಬದ್ಧವಾಗಿಯೂ ಅಸಂಭವನೀಯವಾಗಿಯೂ ನನಗೆ ಮೊದಲು ತೋರಲಿಲ್ಲ. ಸಾಲದ್ದಕ್ಕೆ 'Inter-communal' ವಿವಾಹದ ವಿಚಾರವಾಗಿ ಅವನಿಗೆ ಉಪನ್ಯಾಸಗಳನ್ನು ಕೊಟ್ಟು ತಲೆಯನ್ನು ಚಿಟ್ಟುಹಿಡಿಸಿದ್ದೆ. ಆಮೇಲೆ, ನನ್ನ ಮತ್ತು ಅವನ ತಾಯಿತಂದೆಗಳ ಸ್ಮರಣೆ ಬಂದು ನಗು ಬಂತು. ಒಬ್ಬರನ್ನೊಬ್ಬರು ನೋಡಿದ ಮಾತ್ರಕ್ಕೆ ಸಚೇಲ ಸ್ನಾನಮಾಡಬೇಕೆನ್ನುವವರು ಅವರು. ಮೂರ್ತಿ ತಮಾಷೆ ಮಾಡುತ್ತಾನೆಂದು ಭಾವಿಸಿ "ಅದಕ್ಕೇನಯ್ಯ, ಅಗತ್ಯವಾಗಿ. ನಿನ್ನ ತಂಗೀನ ಮದುವೆಯಾಗುವುದಕ್ಕೆ 'ಕೋಟಿ ಯೋಜನವಿರಲಿ ದಾಟಿಬರುವೆನು'" ಎಂದೆ. ಅವನು "ನಿಜವಾಗಿಯೂ?" ಎಂದ. "ನಿಜವಾಗಲ್ಲದೆ ಮತ್ತೇನಯ್ಯ; ಇದರಲ್ಲಿಯೂ ಹುಡುಗಾಟವೆ?" ಎಂದೆ. ಆ 'ಕೋಟಿಯೋಜನವಿರಲಿ ದಾಟಿ ಬರುವೆನು' ಎಂಬ ಮಾತು ಕೆಲಸ ಕೊಟ್ಟಿತೇನೋ. ಮೂರ್ತಿ ನನ್ನ ಮಾತನ್ನು ನಿಜವೆಂದೇ ನಂಬಿದನೆಂದು ತೋರುತ್ತದೆ. ನನಗೂ ಅವನ ತಂಗಿಗೂ ಇದ್ದ ಸ್ನೇಹ ಸೌಹಾರ್ದಗಳನ್ನೆಲ್ಲಾ ಅನ್ಯಥಾ ಭಾವಿಸಿ, ನಮ್ಮಿಬ್ಬರಿಗೂ ಆಂತರ್ಯವಾದ ಪ್ರೇಮ ಹುಟ್ಟಿಬಿಟ್ಟಿದೆ, ಹೇಗಾದರೂ ಮಾಡಿ ಒಬ್ಬರಿಗೊಬ್ಬರಿಗೆ ಗಂಟುಹಾಕಿ ಬಿಡಬೇಕು ಎಂದು ಮನಸ್ಸಿನಲ್ಲಿ ನಿರ್ಧರಿಸಿದನೇನೋ. ಸರಿ, ಅವಾಂತರಕ್ಕಿಟ್ಟುಕೊಂಡಿತು.

ಮೂರ್ತಿಯ ತಂಗಿ ರತಿಯಲ್ಲದಿದ್ದರೂ ಕುರೂಪಿಯಾಗಿರಲಿಲ್ಲ; ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದಳು. ಆದರೆ ಅಂದಿನವರೆಗೂ ನಾನು ಅವಳನ್ನು ಗಂಡನ ದೃಷ್ಟಿಯಿಂದ ನೋಡಿರಲಿಲ್ಲ. ಮೂರ್ತಿಯ ತಂಗಿಗೆ ನನ್ನಲ್ಲಿ ತನ್ನ

ಅಣ್ಣನಿಗಿಂತ ಹೆಚ್ಚು ಸಲಿಗೆ. ಎಷ್ಟೋ ಸಲ ನನ್ನ ನಾವು ಅಳಿಸಿ ವಿಭೂತಿಯನ್ನು ಮುಖಕ್ಕೆ ಹಚ್ಚಿದಾಳೆ. ಮೂರ್ತಿ ಈ ಮಾತು ಹೇಳಿದ ದಿನ ಮನೆಗೆ ಬರುತ್ತಾ ಆವಳನ್ನು ಹೆಂಡತಿಯ ದೃಷ್ಟಿಯಿಂದ ನೆನಪಿಸಲ್ಲೇ ನೋಡಿಕೊಂಡೆ. ಒಳ್ಳೆಯ ಹುಡುಗಿ; ನನ್ನ ಬಾಳಿನ ನೌಕೆಯನ್ನು ನಡೆಸಲು ಯೋಗ್ಯಳಾದವಳು. ಅಂಥ ಹೆಣ್ಣು ನಮ್ಮ ಜಾತಿಯಲ್ಲೇ ಇದ್ದಿದ್ದರೆ ಮದುವೆಯಾಗುವುದಕ್ಕೆ ನೆಗೆಯುತ್ತಿದ್ದೆನೋ ಏನೋ. ಈಗ ಅದು ಅಸಂಭವ; ಸ್ವಪ್ನದಲ್ಲೂ ನಡೆಯುವಂತಿಲ್ಲ. ಸರಿ, ಅವಳ ಯೋಚನೆ ಅಷ್ಟಕ್ಕೆ ಮುಗಿಯಿತು. ಮಾರನೆಯ ದಿನ ನವರಾತ್ರಿ ರಜ ಬಂತು. ನಾನು ನಮ್ಮೂರಿಗೆ ಹೊರಟು ಬಂದೆ.

(೨)

ಆ ಶುಕ್ರವಾರ ಮೂಲಾ ನಕ್ಷತ್ರ. ಹಯಗ್ರೀವ ಪೂಜೆಗೆ ನಮ್ಮ ಮನೆಯಲ್ಲಿ ಎರೆಯಪ್ಪ ಪಾಯಸ ಮಾಡಿದ್ದರು. ಮಧ್ಯಾಹ್ನ ಹಬ್ಬದೂಟ ಉಂಡು, ಹಾಸಿಗೆಯೊರಗಿಕೊಂಡು, ಪುಸ್ತಕದ ಹಾಳೆಯನ್ನು ತಿರುವುತ್ತಾ ಮಲಗಿದ್ದೆ.

ಸ್ವಲ್ಪ ಹೊತ್ತಿನಮೇಲೆ ಯಾರೋ ಒಂದು ಕಾಗದ ತಂದುಕೊಟ್ಟರು. ನಮ್ಮ ಕಿಟ್ಟು ಇರಬಹುದು. ಕಾಗದ ನೋಡಿದೆ. ಅರಿಸಿನ ಹಚ್ಚಿತ್ತು. ಕೈ ಬರೆಹ ಮೂರ್ತಿಯದು. ಯಾಕೋ ದಿಗಿಲಾಯಿತು. ಕವರು ಬಿಚ್ಚಿ ನೋಡಿದೆ. ಲಗ್ನಪತ್ರಿಕೆ; ಅದರ ಜೊತೆಯಲ್ಲಿ ಒಂದು ಕಾಗದ. ಲಗ್ನಪತ್ರಿಕೆ ಓದಿದೆ. ತಲೆಗೆ ಸಿಡಿಲೆರಗಿದಂದಾಯಿತು. ಮೂರ್ತಿಯ ತಂಗಿ ವಧು, ನಾನು ವರ, ನಾಳೆ ಸೋಮವಾರ ಮದುವೆ! ವಿಚಿತ್ರವಾದ ಅಸಂಭಾವ್ಯವಾದ ಘಟನೆ. ನನ್ನ ಕಣ್ಣನ್ನು ನಾನು ನಂಬದೆ ತಿರುಗಿ ಓದಿದೆ. ಹೌದು ನಿಶ್ಚಯವಾಗಿಯೂ ನಾನು ವರ, ಅವಳು ವಧು. ಸ್ತಬ್ಧನಾಗಿ ಕುಳಿತುಬಿಟ್ಟೆ. ಸ್ವಲ್ಪ ಮಂಕು ತಿಳಿದ ಮೇಲೆ ಕಾಗದವನ್ನು ಬಿಚ್ಚಿ ಓದಿದೆ. ಒಕ್ಕಣೆ ಈ ರೀತಿಯಲ್ಲಿತ್ತು:

"ಆದಿನ ನೀನು ಹೇಳಿದ ಮಾತು ಜ್ಞಾಪಕವಿರಬಹುದು. ಅದರ ಫಲ ಈ ಲಗ್ನಪತ್ರಿಕೆ. ಈ ಕೆಲಸ ಸಾಧಿಸುವುದಕ್ಕೆ ಎಷ್ಟು ಶ್ರಮಪಟ್ಟೆನೋ ದೇವರೇ ಬಲ್ಲ. ಅಪ್ಪನನ್ನೂ ಅಮ್ಮನನ್ನೂ ಒಪ್ಪಿಸುವುದು ವಿಶ್ವಪ್ರಯತ್ನವಾಯಿತು. ಒಳ್ಳೆ ಹುಡುಗ, ಒಳ್ಳೆ ಹುಡುಗಿ, 'ರತ್ನಂ ಸಮಾಗಚ್ಛತು ಕಾಂಚನೇನ' ಎಂದುಕೊಂಡು ಪಡಬಾರದ ಪಾಡುಬಿದ್ದು ಕೆಲಸ ಸಾಧಿಸಿದೆ.

ಓಡಿಬಾ ಮಗು. 'ಕೋಟಿಯೋಜನ'ವೇನೂ ದಾಟಬೇಕಾಗಿಲ್ಲ. ಮೂವತ್ತೇ ಮೈಲಿ.

"ವಿ.ವಿ.—ಲಗ್ನಪತ್ರಿಕೆ ಎಲ್ಲರಿಗೂ ಹಂಚಿದ್ದಾಯಿತು. ಬಂಧುಗಳು ಒಬ್ಬೊಬ್ಬರಾಗಿ ಬರುತ್ತಿದ್ದಾರೆ. ಶನಿವಾರ ಸಾಧ್ಯವಾದರೆ ಬಾ. ಇಲ್ಲದಿದ್ದರೆ ಭಾನುವಾರ ಸಾಯಂಕಾಲದ ಹೊತ್ತಿಗೆ ನೀನು ಇಲ್ಲಿ ಇದ್ದೇ ತೀರಬೇಕು. ನಿನ್ನ ಹತ್ತಿರ ಛಾರ್ಜಿಗೆ ದುಡ್ಡಿದ್ದರೆ ಸಾಕು. ಉಳಿದುದೆಲ್ಲಾ ನಮಗೆ ಸೇರಿದ್ದು. ಆ ವಿಚಾರವಾಗಿ ಏನೂ ಯೋಚನೆ ಮಾಡಬೇಡ."

ಮೂರ್ತಿಯ ಈ ಅನುಸಂಧಾನ ನನಗೊಂದು ದೊಡ್ಡ ಒಗಟಿಯಾಯಿತು. ಅವನು ಅವರಪ್ಪನನ್ನೂ ಅಮ್ಮನನ್ನೂ ಒಪ್ಪಿಸಿದ್ದು ಹೇಗೆ? ಪಡಬಾರದ ಪಾಡುಪಟ್ಟಿರಬೇಕವನು. ನಿಜ, ಮೂರ್ತಿಯ ತಂಗಿಯೇನೋ ಮದುವೆಗೆ ನೆರೆದಿದ್ದಳು. ಏಕೆ, ಇಂದೋ ನಾಳೆಯೋ ದೊಡ್ಡವಳಾಗುವ ಹಾಗೆ ಬೆಳೆದಿದ್ದಳು. ಅವಳ ಮನೆಯವರಿಗೆ ಅವಳನ್ನು ನೋಡಿದಾಗಲೆಲ್ಲ ಕಳವಳ. ಎಷ್ಟು ಹುಡುಕಿ ಅಲೆದು, ಅತ್ತಿಯ ಕಾಯಾಗಿದ್ದರೂ ಅವರಿಗೆ ಅನುರೂಪನಾದ ಸುಲಭನಾದ ವರ, ನಾನು ಈ ಊರಿಗೆ ಬರುವವರೆಗೆ ಸಿಕ್ಕಿರಲಿಲ್ಲ. ಈ ಸಮಯದಲ್ಲಿ ಜಾತ್ರ್ಯಂತರದವನಿಗಾದರೂ ಕೊಟ್ಟು ಮಾನ ಉಳಿಸಿಕೊಳ್ಳೋಣ ಎಂದು ನನಗೆ ಕೊಡಲು ಸಮ್ಮತಿಸಿರಬಹುದು. ಅಂತು ಅದೊಂದು ಒಗಟಿ.

ಅವರ ಮಾತಾಯಿತು. ಕಾಗದದಲ್ಲಿ ನನ್ನ ತಾಯಿತಂದೆಗಳ ಮಾತೇನೂ ಬೇಡವೆ? ನನ್ನನ್ನು 'ಒಂಟರ ಬಂಟರ ಸುಂಟರ ಗಾಳಿ' ಎಂದು ತಿಳಿದುಕೊಂಡುಬಿಟ್ಟರೊ? ಪೂರ್ವಾಪರವಿಚಾರಶೂನ್ಯರಾಗಿ ನನಗೂ ತಿಳಿಸದೆ ಲಗ್ನವಿಟ್ಟಿದಾರಲ್ಲ. ಮದುವೆ ಮಾಡಿಕೊಳ್ಳುವ ಗಂಡಸಿನ ಹತ್ತಿರ ಮಾಂಗಲ್ಯಕ್ಕಾದರೂ ಒಂದು ಕಾಸಿರಬೇಡವೆ? ಮೂರ್ತಿಯೇನೋ, ನಿನ್ನ ಹತ್ತಿರ ಛಾರ್ಜಿಗೆ ದುಡ್ಡಿದ್ದರೆ ಸಾಕು ಎಂದುಬಿಟ್ಟ. ನನಗೆ ಮಾನಮರ್ಯಾದೆ ಏನೂ ಇಲ್ಲವೆಂದು ಅವನ ಭಾವನೆಯೇನೋ. ಇಷ್ಟು ವರ್ಷಗಳು ಸ್ನೇಹಿತರಾಗಿದ್ದೂ ನನ್ನ ಸ್ವಭಾವ ಅವನಿಗೆ ತಿಳಿಯಬೇಡವೆ? ಮುಖ್ಯ ನನ್ನ ತಪ್ಪು; ಅವನಿಗೆ ಆ ಲೆಕ್ಚರು ಹೊಡೆಯಬಾರದಾಗಿತ್ತು. ಏನು ತಿಳಿಗೇಡಿತನ ಅವನದು! ಅಥವಾ ಏನಾದರೂ ಹುಡುಗಾಟ ಮಾಡುತ್ತಿದಾನೊ? 'Inter-

communal ' ವಿವಾಹದ ಮೇಲೆ ನಾನು ಅವನಿಗೆ ಉಪನ್ಯಾಸ ಮಾಡು ತ್ತಿದ್ದಾಗ "ಬಾಯಲ್ಲಿ ಹೇಳುವುದು ಸುಲಭಾಯ್ಯಾ—ಹೇಳು, ಹೇಳು, ಬೇಕಾ ದಷ್ಟು ಹೇಳು ಬೇಕಾದಷ್ಟು ಹೇಳು" ಎಂದಿದ್ದ. "ಎಲ್ಲರಂತೆ ನಾನೂ ಎಂದು ತಿಳಿದುಕೊಂಡುಬಿಟ್ಟೆಯೋ ? ಧ್ಯೇಯದ ಅನುಷ್ಠಾನಕ್ಕಾಗಿ ಯಾವುದ ನ್ನಾದರೂ ಏನನ್ನಾದರೂ ತೊರೆದೇನು, ಕೊನೆಗೆ ತಾಯಿತಂದೆಗಳನ್ನಾದರೂ ಬಿಟ್ಟೇನು" ಎಂದು ಅವನನ್ನು ದಬಾಯಿಸಿದ್ದೆ. ಈಗ ನನ್ನ ಬಾಳನ್ನು ಒರೆಯಲ್ಲಿ ತೀಡುತ್ತಿದಾನೊ? ಅವನದು ಹುಡುಗಾಟವಾಡುವ ಸ್ವಭಾವವಲ್ಲ. ಉಹು, ಇದು ಹುಡುಗಾಟಿಕೆಯಲ್ಲ. ಏನು ಹುಚ್ಚಿದು ! ನನಗಂತೂ ಬಹಳ ಕೋಪಬಂತು. ಕಾಗದ ಲೇಖನಿ ತೆಗೆದುಕೊಂಡು ಬರೆಯಲು ಮೊದಲು ಮಾಡಿದೆ. "ಮೂರ್ತಿ, ನೀನೊಬ್ಬ ಹುಚ್ಚ, ಅವಿವೇಕಿ ; ನೀನು ಹುಡು ಗಾಟಕ್ಕೂ ಯೋಗ್ಯನಲ್ಲ ಎಂಬ ಸಂಗತಿ ನನಗೆ ಮೊದಲೇ ತಿಳಿದಿದ್ದರೆ ಚೆನ್ನಾ ಗಿತ್ತು. ಪೂರ್ವಾಪರ ವಿಚಾರಶೂನ್ಯರೊಡನೆ ಬಳಕೆಯೇ ಮುಟ್ಠಾಳತನ ...."

ಲೇಖನಿ ನಿಂತಿತು. ಹೀಗೆ ಬೈದು ಕಾಗದ ಬರೆದರೆ, ಅದು ಅವನಿಗೆ ತಲಪಿದರೆ, ನಮ್ಮ ಸ್ನೇಹ ಅಲ್ಲಿಗೆ ಮುಗಿಯಿತು. ಆಮೇಲೆ ನನ್ನ ಬಾಳು ನೀರು ಬತ್ತಿದ ನದಿಯ ಹಾಗೆ. ಅಷ್ಟಕ್ಕೂ ಪಾಪ, ಅವನದೇನು ತಪ್ಪು ? ವಿವಾಹದ ವಿಚಾರದಲ್ಲಿ ನನ್ನ ಧ್ಯೇಯಗಳನ್ನು ತಿಳಿದುಕೊಂಡು, ನಾನು ಆ ಹೆಣ್ಣಿಗೆ ಹಾತೊರೆಯುತ್ತಿದ್ದೇನೆ ಎಂದೂ ಭಾವಿಸಿ, ಇಷ್ಟೆಲ್ಲಾ ಮಾಡಿರ ಬಹುದು. "ವರ ಒಪ್ಪಿದ ಮೇಲೆ ಅವನ ತಂದೆ ಒಪ್ಪಿದರೆಷ್ಟು ಬಿಟ್ಟರೆಷ್ಟು ? ಅವರನ್ನು ಕಟ್ಟಿಕೊಂಡು ನಮಗೇನು" ಎಂದು ಅವನ ಮನೆಯವರೂ ಘೋಷಣೆಮಾಡಿರಬಹುದು. "ಅವರನ್ನು ಕಟ್ಟಿಕೊಂಡು ನಮಗೇನು ?" ಎಂದು ನಾನು ಹೇಳುವುದಕ್ಕಾಗುತ್ತದೆಯೆ? ಬಾಳಿತ್ತವರವರು ; ಒಲವೆರೆದು ಬಾಳನ್ನು ಬೆಳೆಸಿದವರವರು ; ತಮ್ಮ ಜೀವನವನ್ನು ವಿಭಾಗಿಸಿ ನನ್ನಲ್ಲಿ ಅವಿ ತಿಟ್ಟಿರುವವರವರು—ನಾನು ಹಾಗೆನ್ನುವುದಕ್ಕಾಗುತ್ತದೆಯೆ? ಈ ಮದುವೆಗೆ ಅವರು ಒಪ್ಪುತ್ತಾರೆಯೆ ? ಅಸಂಭವ. ಹೌದು, ಅಸಂಭವ. ನಾನೊಂದು ಅಗಾಧವಾದ ಅಂಧಕಾರಮಯವಾದ ಆಲೋಚನಾಕೂಪದಲ್ಲಿ ಮುಳುಗೇಳುತ್ತಿದ್ದೆ. ಕೂಪವು ನನ್ನನ್ನು ನುಂಗುವಂತೆ ತೋರಿತು. ಪಾರಾ ಗುವ ಉಪಾಯಗಳನ್ನು ಚಿಂತಿಸಿ ಚಿಂತಿಸಿ ಸಾಕಾಯಿತು. ಸಮಸ್ಯೆಯ

ಗಭೀರತೆಯೂ ಭಯಂಕರಸ್ವರೂಪವೂ ಕ್ಷಣೇ ಕ್ಷಣೇ ಹೆಚ್ಚು ಹೆಚ್ಚಾಗಿ ತೋರಹತ್ತಿತು. ಅಂದು ಶುಕ್ರವಾರ. ಸೋಮವಾರ ಮದುವೆ. 'ಊಹು' ಎನ್ನುವ ಹಾಗಿಲ್ಲ. 'ಹು' ಎನ್ನುವ ಹಾಗೂ ಇಲ್ಲ. 'ಹು' ಎಂದರೆ ಮನೆ ಬಿಟ್ಟು ಹೊರಡಬೇಕು. 'ಊಹು' ಎಂದರೆ ಮೂರ್ತಿಯ ಸ್ನೇಹ ಬಿಡ ಬೇಕು—ನನ್ನಾತ್ಮಕ್ಕೆ ನಾನೇ ಎರಡು ಬಗೆದುಕೊಳ್ಳಬೇಕು. ಎಂತಹ ವಿಷಮ ಸಮಸ್ಯೆ ಇದು. ಆದಿನ ನನಗೆ ಅನ್ನ ಸೇರಲಿಲ್ಲ. ಸಮರಾತ್ರಿಯಾದರೂ ನಿದ್ದೆ ಬರಲಿಲ್ಲ. ಬೆಳಗಾದರೆ ಶನಿವಾರ. ಶನಿವಾರವಾದಮೇಲೆ—ಆದಮೇಲೆ— ಭಾನುವಾರ. ನಾನೇನು ಮಾಡುವುದು? ತಾಯಿತಂದೆಗಳಿಗೆ ಹೇಳುವುದೆ? ಹೇಳದೆ ಬಿಟ್ಟು ಹೋಗುವುದೆ? ಮದುವೆಗೆ ಹೋಗದೆ ನಿಂತುಬಿಡುವುದೆ?

ಏನೆಂದು ತೀರ್ಮಾನ ಮಾಡುವುದು? ಅದೊಂದು ಒಗಟೆ. ಈ ಒಗಟೆ ಯನ್ನು ಬಿಡಿಸುವುದು ಹೇಗೆ?

ಮೂರ್ತಿಯ ತಂಗಿಯನ್ನು ಮದುವೆಮಾಡಿಕೊಳ್ಳುವುದು ಅಷ್ಟು ಮಹ ತ್ತರವಾದ ಪಾಪವೆ? ಅದರಲ್ಲಿ ತನ್ನ ತಂದೆಗೇಕೆ ಅಸಮಾಧಾನವಾಗಬೇಕು? ಅವರ ಸಮ್ಮತಿಯನ್ನು ಪಡೆಯುವುದು ಅಸಾಧ್ಯವೆ? ಅವರು ವಿಚಾರಪರರು, ಶಾಸ್ತ್ರವೇತ್ತರು. ಪಾಪವಲ್ಲವೆಂದು ನಾನು ತಿಳಿದುಕೊಂಡಿರುವುದನ್ನು ಯುಕ್ತಿ ವಾದಗಳಿಂದ ಮನಹೊಗುವಂತೆ ಅವರೊಡನೆ ಚರ್ಚಿಸಿದರೆ ಒಡಂಬಡ ಬಹುದು. ಸಮಸ್ಯೆಯನ್ನು ಬಿಡಿಸುವುದಕ್ಕೆ ಅದೊಂದೇ ಮಾರ್ಗ. ಹೇಗಾದರೂ ಮಾಡಿ ಅವರ ಸಮ್ಮತಿ ಪಡೆಯಬೇಕು. ಮೂರ್ತಿಗೆ ತನ್ನ ಮನೆಯವರನ್ನು ಒಪ್ಪಿಸಲು ಸಾಧ್ಯವಾದರೆ ನನಗೇಕೆ ಅದು ಅಸಾಧ್ಯ?

ನನಗಂತೂ ಸ್ಮಾರ್ತರ ಹುಡುಗಿಯನ್ನು ಮದುವೆಮಾಡಿಕೊಳ್ಳುವುದ ರಲ್ಲಿ ಯಾವ ಕುಂದೂ ಕಂಡುಬರಲಿಲ್ಲ. ಶಂಕರಾಚಾರ್ಯರೂ ರಾಮಾನುಜಾ ಚಾರ್ಯರೂ ಮುಕ್ತಿಯ ವಿಚಾರದಲ್ಲಿ–ಜೀವಾತ್ಮ ಪರಮಾತ್ಮಸಂಬಂಧ ವಿಚಾರ ವಾಗಿ–ಭಿನ್ನಾಭಿಪ್ರಾಯವುಳ್ಳವರಾದರೆ ನಮಗೇನು? ಅವರೋ ಸನ್ಯಾಸಿಗಳು; ಸರ್ವಸಂಗ ತ್ಯಾಗಿಗಳು; ಜೀವನದಲ್ಲಿ ಅವರಿಗೆ ಜಿಹಾಸೆ, ಬೇಸರಿಕೆ; ಬಾಳು ಅವರಿಗೆ ಬಂಧನ. ಅವರು ಚರ್ಚಿಸುವುದು ಸಾವಿನಾಚೆಯ ಸಮಸ್ಯೆ—ಅಂತ ವಿಲ್ಲದ ಸಮಸ್ಯೆ. ಜೀವಿತಕ್ಕೂ ಆ ಜಗಳಕ್ಕೂ ಏನು ಸಂಬಂಧ? ಅದು ಯಾಕೆ ನಮ್ಮಿಬ್ಬರ ಮದುವೆಗೆ ಅಡ್ಡ ಬರಬೇಕು? 'ಹೌದು, ಯಾಕೆ?' ನನಗೆ

ಮುಕ್ತಿಯ ವಿಚಾರದಲ್ಲಿ ಮಾತ್ರ ಬೇರೆ ವಿಧವಾದ ದೃಷ್ಟಿಯುಳ್ಳವರೆಲ್ಲರೂ ನಮಗಿಂತ ಕೀಳೆಂದು ಹೇಳುವುದು ಯಾವ ನ್ಯಾಯ? ಅದು ನಮ್ಮ ವಿನಯಕ್ಕೆ ದೊಡ್ಡ ಕುಂದಲ್ಲವೆ? ಶಾಸ್ತ್ರಗಳು ಮೇಲು ಕೀಳುಗಳ ಅಂತರವನ್ನು ಮತದೃಷ್ಟಿಯಿಂದ ಅಳೆದಿರಲಾರವು. ಹಾಗೆ ಅಳೆದಿದ್ದರೆ ಅವು ಮರ್ಯಾದೆಗೆ ಯೋಗ್ಯವಲ್ಲ."

"ಮುಟ್ಠಾಳ, ತಿಳಿಗೇಡಿ, ದುರ್ವಿದಗ್ಧ! ಮುಚ್ಚು ಬಾಯಿ. ರಾಮಾನುಜಾಚಾರ್ಯರ ಮಾತು ಸುಳ್ಳೆ? ಅವರಿಗೆ ಮುಕ್ತಿಮಾರ್ಗ ಗೊತ್ತಿಲ್ಲವೆ? ದೇವಾಂಶಸಂಭೂತರವರು, ದೇವಚಕ್ಷುಸ್ಸುಳ್ಳವರು. ಅವರಲ್ಲಿ ಅಪನಂಬಿಕೆಯೆ? ದೇಶಿಕರ ವಚನ ಮರ್ಯಾದೆಗೆ ಯೋಗ್ಯವಲ್ಲವೆ? ನಿನ್ನ ತಪ್ಪಲ್ಲ ಅದು—ಕಾಲದ ಮಹಿಮೆ. ಶುದ್ಧ ಶ್ರೀವೈಷ್ಣವನು ಭಸ್ಮಲೇಪಿಯೊಡನೆ ಸಂಬಂಧ ಮಾಡಬೇಕು. ಶ್ರೀವೈಷ್ಣವರ ಮನೆಯಲ್ಲಿ ಗೌರೀಪೂಜೆ, ಕನ್ನಡ ಮಾತು—ದೇವರ ಪೂಜೆ ಮಾಡುವಾಗಲೂ, ಊಟ ಮಾಡುವಾಗಲೂ, ಶ್ರಾದ್ಧದ ದಿನವೂ—ಕನ್ನಡ ಮಾತು. ನಿರಿಸೀರೆ ಉಟ್ಟುಕೊಂಡು ಹೆಂಗಸಿನ ಓಡಾಟ. ಮಗ ಹುಟ್ಟಿದ್ದಕ್ಕೆ ಸಾರ್ಥಕವಾಯಿತು."

"ಅಣ್ಣ, ಅಣ್ಣ, ಸ್ವಲ್ಪ ನಿಧಾನಿಸಿಕೊ, ಈ ಒಗಟನ್ನು ನೀನೇ ಬಿಡಿಸಬೇಕು. ನಾನೇನೋ ಹುಡುಗಾಟಕ್ಕಾಗಿ ಮದುವೆಯಾಗುತ್ತೇನೆ ಎಂದೆ. ಅವನ್ನೇ ದೊಡ್ಡದು ಮಾಡಿಬಿಟ್ಟು ಲಗ್ನ ಇಟ್ಟುಬಿಟ್ಟಿದ್ದಾರೆ. ನಾಳೆ ಸೋಮವಾರವೇ ಮದುವೆ. ಅವರಿಗೆ ನಾನೇನು ಉತ್ತರ ಹೇಳಲಿ? 'ಊಹು' ಎನ್ನುವುದಕ್ಕೂ ಕಾಲವಿಲ್ಲ. ಹುಡುಗಿ ಒಳ್ಳೆಯವಳು. ಹೇಳಿದ ಹಾಗೆ ಕೇಳುತ್ತಾಳೆ. ಮನೇಲಿ ಅಮ್ಮ ಇಲ್ಲವೆ ಆಚಾರ ವ್ಯವಹಾರ ಕಲಿಸೋದಕ್ಕೆ? ಬೇಕಾದರೆ ಶುದ್ಧಿಮಾಡಿ, ಸಮಾಶ್ರಯಣ ಮಾಡಿಸಿ ವೈಷ್ಣವಿಯಾಗಿ ಮಾಡೋಣ. ರಾಮಾನುಜಾಚಾರ್ಯರು ಎಷ್ಟೋ ಜನಕ್ಕೆ ಮುದ್ರೆಯೊತ್ತಿ ಶ್ರೀವೈಷ್ಣವರನ್ನಾಗಿ ಮಾಡಲಿಲ್ಲವೆ? ಆಗ ಜಾತಿ ಎಲ್ಲಿ ಹೋಗುತ್ತೆ? ಹುಡುಗಿಗೆ 'ಗೌರಿಪೂಜೆ ಮಾಡಬೇಡ. ನಿರಿಸೀರೆ ಉಡಬೇಡ. ಮಡಿಶಾರನ್ನೇ ಉಟ್ಟುಕೊ. ಕನ್ನಡ ಮಾತಾಡಬೇಡ, ತಮಿಳು ಮಾತಾಡು' ಅಂದರಾಯಿತು. ಹುಡುಗಿಗಾಗಲೇ ತಮಿಳು ಬರುತ್ತೆ..........."

ಮಡಿಶಾರುಟ್ಟು ತಮಿಳು ಮಾತಾಡುವ ಮೂರ್ತಿಯ ತಂಗಿಯನ್ನು

ನೆನೆದುಕೊಂಡೆ. ಬಹಳ ನಗು ಬಂತು. ಊಹು ; ವಾದಿಸಿ ಪ್ರಯೋಜನವಿಲ್ಲ. ಇಷ್ಟಕ್ಕೂ ವಾದಕ್ಕೆ ಅಪ್ಪ ಅವಕಾಶ ಕೊಡುತ್ತಾರೆಯೆ? ಕೇಳಿದ ಕ್ಷಣ ಹೊಡೆದು ಬಡಿದು ಓಡಿಸಿ ಬಿಡುತ್ತಾರೆ. ನಮ್ಮ ದೃಷ್ಟಿಯಿಂದ ಈ ಪ್ರಶ್ನೆಯನ್ನು ಅವರು ನೋಡುವುದು ಅಸಾಧ್ಯ. ಮತದ ನಂಬಿಕೆ ಅವರಿಗೆ ಹುಟ್ಟಿದಂದಿನಿಂದ ಜೊತೆಗೂಡಿ ಬಂದದ್ದು. ಬೇರೆ ಸಂಸ್ಕೃತಿಗಳ ತುಮುಲಕ್ಕೆ ಅವರಾತ್ಮ ಸಿಕ್ಕಿಲ್ಲ. ಪೂರ್ವಾಚಾರವೇ ಅವರಿಗೆ ವೇದವಾಕ್ಯ. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎನ್ನುವವರವರು. ಆ ಬಣ್ಣದ ಕನ್ನಡಕದಿಂದಲೇ ಅವರು ಇತರರನ್ನು ನೋಡುವುದು, ಇತರರ ನಂಬಿಕೆಗಳನ್ನು ನೋಡುವುದು. ಅವರು ಹುಟ್ಟಿದಂದಿನಿಂದ ಆ ಕನ್ನಡಕದಿಂದಲೇ ನೋಡಿದ ಅಭ್ಯಾಸ. ಅವರ ಕಣ್ಣೊಂದಿಗೆ ಅಂಟಿಕೊಂಡು ಬೆಳೆದು ಬಂದಿದೆ ಅದು. ಅದಿಲ್ಲದಿದ್ದರೆ ಅವರು ಕುರುಡರು—ಅವರ ಬಾಳು ಅರ್ಥಶೂನ್ಯ, ಜೀವಶೂನ್ಯ. ಅವರ ತಪ್ಪೇನು? ಉಹು, ಅವರೊಡನೆ ವಾದಿಸುವುದು ಧರ್ಮವೂ ಅಲ್ಲ. ಹಾಗಾದರೆ ಇನ್ನೇನು ಮಾರ್ಗ? ಮೂರ್ತಿಯ ತಂಗಿಯನ್ನು ಮದುವೆಯಾಗಲೆ? ಹಾಗಾದರೆ ಮನೆಬಿಟ್ಟು ಹೊರಡಬೇಕು—ಎಂತಹ ಸುಖಮಯವಾದ ಮನೆ. ನಿಂತುಬಿಡಲೆ? ಮೂರ್ತಿ ಸುಮ್ಮನೆ ಬಿಡುತ್ತಾನೆಯೇ? ಬಹು ಮಾನಿಷ್ಠ—ದುರ್ಯೋಧನನಿಗಿಂತ ಹೆಚ್ಚು. ಪ್ರಾಣ ಕಳೆದುಕೊಂಡರೊ? ಎಂತಹ ಸ್ನೇಹ. ಈ ಸ್ನೇಹ ಮುರಿದರೊ? ಅದನ್ನು ಯೋಚಿಸಿದರೇ ಹುಚ್ಚು ಹಿಡಿದುಹೋಗುತ್ತದೆ. ಏನು ಮಾಡುವುದು? ನಾಳೆ ಮೂರ್ತಿಯಿಂದ ಕಾಗದ ಬರಬಹುದು. ತಿರುಗಿ ಯಾಕೆ ಕಾಗದ ಹಾಕುತ್ತಾನೆ ಅವನು? ಹೇಗಾದರೂ ಆಗಲಿ, ಇನ್ನೂ ನಾಳೆಯೊಂದು ಇದೆಯಲ್ಲ; ಈದಿನ ಕಳೆಯೋಣ.

(೩)

ಹಾಗೂ ಹೀಗೂ ಶುಕ್ರವಾರ ಕಳೆಯಿತು. ಶನಿವಾರ ಬಂತು. ಮೂರ್ತಿಯಿಂದ ಕಾಗದ ಬರಲಿಲ್ಲ. ಇದು ಹುಡುಗಾಟಿಕೆಯಲ್ಲ. ನಾನೇನು ಮಾಡುವುದು?

ಅಂದೂ ನಾನು ನಮ್ಮ ಮನೆಯವರಿಗೆ ಸಮಾಚಾರ ತಿಳಿಸಲಿಲ್ಲ. ಏನೆಂದು ತಿಳಿಸುವುದು? ಹೇಗೆ ತಿಳಿಸುವುದು? ಆ ಶನಿವಾರ ಒಂದು ದಿನ

ಮಾತ್ರ ನಾನು ನಮ್ಮ ಮನೆಯಲ್ಲಿರಬಹುದು. ನಮ್ಮೂರಿನಲ್ಲಿರುವುದಕ್ಕೂ ಅದೇ ಕೊನೆಯ ದಿನ ಹೌದು. ಅದೇ ನನ್ನ ಸಂತೋಷದ ಚರಮ ದಿನ. ನನ್ನ ಪುತ್ರತ್ವದ, ಭ್ರಾತೃತ್ವದ, ಅಂತ್ಯದಿನ. ಆ ದಿನದ ಒಂದೊಂದು ನಿಮಿಷವೂ ಅಮೂಲ್ಯವಾದುದು. ಆದರೆ ಗಳಿಗೆಗಳು ಏನು ವೇಗದಿಂದ ಓಡುತ್ತಿವೆ! ಸೋಮವಾರದ ದಿನ ನನ್ನ ಸ್ನೇಹಕ್ಕೆ ನನ್ನ ಮಾತಾಪಿತೃ ಪ್ರೇಮದ ಬಲಿದಾನವಾಗಬೇಕು. ಎಂಥ ಭಯಂಕರವಾದ ದಿನವದು! ನಿಮಿಷಗಳೆಷ್ಟು ವೇಗದಿಂದ ಆ ಹೆಮ್ಮಾರಿಯ ರಥವನ್ನು ನನ್ನೆಡೆಗೆ ತುಯ್ದು ಸಾಗುತ್ತಿವೆ! ಅವುಗಳನ್ನು ತಡೆಯುವುದು ನನಗೆ ಸಾಧ್ಯವಿಲ್ಲ—ಯಾರಿಗೂ ಸಾಧ್ಯವಿಲ್ಲ. ಕ್ಷಣೇ ಕ್ಷಣೇ, ಹತ್ತಿರ ಹತ್ತಿರ, ಮೆಲ್ಲ ಮೆಲ್ಲನೆ, ಆದರೆ ನಿಶ್ಚಯವಾಗಿ, ಆ ಸೋಮವಾರ ನನ್ನೆಡೆಗೊಯ್ಯಲ್ಪಡುತ್ತಿದೆ. ಅಂದು ನನ್ನ ಸುಖಸಂತೋಷಗಳು ಕಾಲಚಕ್ರಕ್ಕೆ ಸಿಕ್ಕಿ ನಂದಬೇಕು. ಬೆಳಗಾಯಿತು. ಮಧ್ಯಾಹ್ನವಾಯಿತು. ಸಾಯಂಕಾಲವಾಗುತ್ತಾ ಬಂತು. ಇನ್ನೇನು ರಾತ್ರಿ. ಬೆಳಗಾದರೆ ಆದಿತ್ಯವಾರ. ಆ ದಿನವೇ—ಅಸಂಭಾವ್ಯವಾದ ಇನ್ನೊಂದು ಘಟನೆ ಸಂಭವಿಸದಿದ್ದರೆ—ನಾನು ಮದುವೆಗೆ ಹೊರಟೇ ತೀರಬೇಕು. ಇನ್ನೇನು ಗತಿ?

ಆ ಶನಿವಾರ ರಾತ್ರಿ ನನ್ನ ಒಂದು ವರುಷದ ಪುಟ್ಟ ತಮ್ಮನನ್ನು ನನ್ನ ತೊಡೆಯ ಮೇಲೆ ಮಲಗಿಸಿಕೊಂಡು ತಲೆಯನ್ನು ಮೆಲ್ಲನೆ ತಟ್ಟುತ್ತಾ ಮಂಚದ ಮೇಲೆ ಕುಳಿತಿದ್ದೆ. ಇನ್ನೊಬ್ಬ ತಮ್ಮನು ನನ್ನ ಬೆನ್ನ ಹಿಂದೆ ಹೆಗಲಿಗೆ ಜಗ್ಗಿ ಬಿದ್ದು, ಸೊಂಟಕ್ಕೆ ಕಾಲು ಹಚ್ಚಿ, ಭುಜದ ಮೇಲೆ ನೆಗೆಯುವುದಕ್ಕೆ ಪ್ರಯತ್ನಿಸುತ್ತಿದ್ದ. ಕೆಳಗಡೆ ನನ್ನ ತಂಗಿ ಮೃದುವಾಗಿ ಕೋಮಲವಾಗಿ, ಇರುಳು ಹೊದೆಸಿದ್ದ ಮೌನದ ಮಾಧುರ್ಯವನ್ನು ಇಮ್ಮಡಿಸುವಂತೆ ತನಗೆ ತಾನೆ ಹಾಡಿಕೊಳ್ಳುತ್ತಾ ಎಲೆ ಹಚ್ಚುತ್ತಿದ್ದಳು. ಒಳಗಡೆ ನಮ್ಮ ತಾಯಿ ಅಡಿಗೆ ಮಾಡುತ್ತಿದ್ದರು. ತೊಡೆಯ ಮೇಲಿದ್ದ ಕೂಸು ಮಲಗಲಿಲ್ಲ. ಅದರ ಕಣ್ಣು ನನ್ನ ತಲೆಯ ಮೇಲೆ ಉರಿಯುತ್ತಿದ್ದ ದೀಪದ ಕಡೆಗೆ ತೇಲಿಹೋಗಿತ್ತು. ಎಂಥ ಮುದ್ದಾದ ಮುಖ, ಕಂಗಳ ಆ ಪರವಶತೆಯ ಸೌಂದರ್ಯ! ಮಗುವನ್ನು ದಿಟ್ಟಿಸಿದೆ. ನನ್ನ ತೊಡೆಯ ಮೇಲೆ ಆ ಮುದ್ದನಿಗೆ ತಾಯ ತೊಡೆಯ ಮೇಲಿದ್ದಷ್ಟು ಸೌಖ್ಯ ಮತ್ತು ನೆಮ್ಮದಿ. ನನ್ನಾತ್ಮದಲ್ಲೂ ಆ ಸೌಖ್ಯದ ಆ ನೆಮ್ಮದಿಯ ಹೊಳಪಿತ್ತು. ನಾನು ಮಗುವನ್ನು ಹೀಗೆ ತೊಡೆಯ ಮೇಲೆ

ಮಲಗಿಸಿಕೊಂಡು ದೀಪಸ್ನಿಗ್ಧವಾದ, ವಿಕಸಿತವಾದ, ಪರವಶವಾದ ಆ ಕಣ್ಣುಗಳನ್ನು ನೋಡುವುದಕ್ಕೂ ಅಂದೇ ಕೊನೆ. ಅವನನ್ನು ನಾಳೆಯೇ ತೊರೆಯಬೇಕು, ಬಂಧುಗಳಿಗೆ ಬಾಹಿರನಾಗಬೇಕು. ನನ್ನಲ್ಲಿ ತಂದೆ ತಾಯಿಗಳಿಟ್ಟಿರುವ ಅಷ್ಟು ನಚ್ಚನ್ನೂ ಅಳಿಸಿಬಿಡಬೇಕು, ಅವರೊಡಲ ಶೂಲವಾಗಬೇಕು. ಇಲ್ಲವಾದರೆ ಆತ್ಮದ್ರೋಹಿಯಾಗಿ ಮೂರ್ತಿಯ ಸ್ನೇಹಕ್ಕೂ ತಿಲಾಂಜಲಿಯನ್ನು ಬಿಡಬೇಕು. ದುಃಖ ಉಮ್ಮಳಿಸಿ ಕಣ್ಣುಗಳಲ್ಲಿ ನೀರು ತುಂಬಿತು. ಆ ಸಮಯದಲ್ಲಿ ಹೆಗಲಿನ ಮೇಲಕ್ಕೆ ಅತಿ ಪ್ರಯಾಸದಿಂದ ಹತ್ತಿದ್ದ ಇನ್ನೊಬ್ಬ ತಮ್ಮ ನನ್ನ ಕಣ್ಣುಗಳನ್ನು ಆಟಕ್ಕೆ ತನ್ನ ಪುಟ್ಟ ಕೈಗಳಿಂದ ಮುಚ್ಚುತ್ತಿದ್ದನು. ಕೈಗಳು ತೊಯ್ದುದನ್ನು ನೋಡಿ ಆ ಕೂಸು, ತನ್ನ ಬೆರಳುಗಳು ನನ್ನ ಕಣ್ಣುಗಳನ್ನು ನೋಯಿಸಿದುವೆಂದು ತಿಳಿದು, ಜಗ್ಗನೆ ಕೆಳಕ್ಕಿಳಿದು, ತನ್ನ ಎರಡು ಕೈಗಳಿಂದಲೂ ನನ್ನ ಗಲ್ಲವನ್ನಪ್ಪಿ, ಕರುಣಾರ್ದ್ರವಾದ ದೃಷ್ಟಿಯನ್ನು ಮೊಗದಲ್ಲಿ ನೆಟ್ಟು, "ಅಣ್ಣಯ್ಯ, ಪೆಟ್ಟಾಯಿತೆ? ಅಳಬೇಡ. ಕಾಣಲಿಲ್ಲ ಅಣ್ಣಯ್ಯ. ಇನ್ನು ಮೇಲೆ ಹಾಗೆ ಮಾಡೋದಿಲ್ಲ" ಎಂದನು. ಆ ಮಾತಿಗೆ ನನ್ನ ಕಂಬನಿ ಹೊನಲಿನ ಕಟ್ಟೆಯೊಡೆಯಲು ನನ್ನ ಮುಖಕ್ಕೆತ್ತಿದ್ದ ಅವನ ಮುಖ ತೊಯ್ದು ಹೋಯಿತು. ತೊಯ್ದ ಆ ಮುಖವನ್ನು ಮುದ್ದಿಟ್ಟು ಮುದ್ದಿಟ್ಟು ದಣಿಯದಾದೆನು.

(೪)

ಸಮರಾತ್ರಿ. ಆದರೆ ಇಷ್ಟು ದುಗುಡವನ್ನು ಹೊತ್ತಿದ್ದ ಆತ್ಮಕ್ಕೆ ನಿದ್ದೆಯ ಬಿಡುವುಂಟೆ? ಅತ್ತು ಸಂಕಟ ಸ್ವಲ್ಪ ತಣಿದಿತ್ತು. ಆದರೆ ಸಮಸ್ಯೆ ಪೂರ್ಣವಾಗದೆ ನಿಂತಿತ್ತು. ಬೆಳಗಾದರೆ ಭಾನುವಾರ. ಬೆಳಗಾಗುವುದರೊಳಗೆ ನಾನು ಯಾವುದಾದರೊಂದು ತೀರ್ಮಾನವನ್ನು ಮಾಡಿಯೇ ತೀರಬೇಕು. ಬೋನಿಗೆ ಬಿದ್ದ ಹುಲಿ ಬೋನಿನ ಸಲಾಕೆಗಳ ಮೇಲೆ ನೆಗೆದು, ಪಂಜದಲ್ಲಿ ಹೊಡೆದು, ಪೆಟ್ಟುಮಾಡಿಕೊಳ್ಳುವಂತೆ ನನ್ನ ಮನಸ್ಸೂ ಈ ಸಮಸ್ಯೆಯ ಬೋನಿನಿಂದ ಪಾರಾಗುವ ಪ್ರಯತ್ನದಲ್ಲಿ ಪೆಟ್ಟುತಿಂದು ಶ್ರಾಂತವಾಗಿತ್ತು. ಮನಸ್ಸಿಗೆ ಯಾವ ಉಪಾಯವೂ ತೋಚಲಿಲ್ಲ. ಶುಕ್ರವಾರ ರಾತ್ರಿ ಹೂಡಿದ್ದ ಚರ್ಚೆಗಳನ್ನೆಲ್ಲಾ ತಿರುಗಿ ಹೂಡಿತು. "ಊಹು, ಅಪ್ಪನ ನಂಬಿಕೆಯ ಕನ್ನಡಕವನ್ನು ಓರೆಮಾಡುವುದು ಅಸಾಧ್ಯ" ಎಂದುಕೊಂಡು ಸುಮ್ಮನಾಯಿತು.

"ಹಾಗಾದರೆ ಬೇರೆ ಉಪಾಯವೇ ಇಲ್ಲವೆ?" ಒಂದೊಂದು ವೇಳೆ ಯೋಚನೆ ಕತ್ತಲೆಯ ಮಧ್ಯದಲ್ಲಿ ಬೆಳಕೊಂದು ಮಿಂಚಿ ಮಾಯವಾಗುವುದು, ಆದರೆ ಬೆಳಕಿನ ಅಂಚಿನಲ್ಲಿ ಮಹಾಭಯವೊಂದು ಕಾಣಿಸಿಕೊಳ್ಳುವುದು. ಆ ಭಯಕ್ಕೆ ಅಂಜಿ ಆ ಬೆಳಕನ್ನು ನೋಡಿದರೂ ನೋಡದಂತೆ ಸ್ವಲ್ಪ ಹೊತ್ತಿನವರೆಗೆ ಮನವಿತ್ತು. ಗತ್ಯಂತರವಿಲ್ಲದೆ ಕೊನೆಗೆ ನೋಡಿತು. ಆ ಬೆಳಕು ತೋರಿದ ದಾರಿಯೇನು ? ಆತ್ಮಹತ್ಯೆ ! ಅಬ್ಬ ಆತ್ಮಹತ್ಯೆ, ಬಾಳನ್ನು ಬಿಸಾಡುವುದು, ಇಂದ್ರಿಯಗಳ ಉಪಶಮನ, ಆಸೆಗಳಿಗೆ ಚಿತೆಯೊಡ್ಡುವುದು, ಜೀವಿತದ ಭಾವೀ ಸುಖಗಳ ನಚ್ಚನ್ನು ನಂದಿಸುವುದು. ಹೌದು, ಅದೊಂದೇ ಉಪಾಯ. ಈ ಉಪಾಯದಿಂದ ಪಿತೃಪ್ರೇಮವನ್ನೂ, ಮಿತ್ರಪ್ರೇಮವನ್ನೂ, ಬಂಧುಪ್ರೇಮವನ್ನೂ ನನ್ನ ಬೂದಿಯಲ್ಲಿ ನೆಲೆಗೊಳಿಸಬಹುದು. ಈ ದಾರಿ ಅತ್ಯಂತ ಸುಲಭವಾದುದೂ ಹೌದು. ಆದರೆ, ಮೂರ್ತಿಗೂ ಇತರರಿಗೂ ನಾನು ಇದಕ್ಕೋಸ್ಕರ ಸತ್ತೆನೆಂದು ಸರ್ವಥಾ ತಿಳಿಯಕೂಡದು—ಹಾಗೆ ಸಾಯಬೇಕು. ಆದರೆ, ಆತ್ಮಹತ್ಯೆ ! ನಿರ್ದುಷ್ಟವಾದ, ಈಗ ತಾನೆ ಬಿರಿಯುತ್ತಿರುವ ಬಾಳಿಗೆ ಎಂತಹ ಭಯಂಕರವಾದ ಕೊನೆ !

ಬಹಳ ಹೊತ್ತು ಹೋರಾಡಿ, ಕೊನೆಗೆ ಗತ್ಯಂತರವಿಲ್ಲದೆ ಆತ್ಮಹತ್ಯವನ್ನು ನಿರ್ಧರಿಸಿದೆ. ಬೆಳಕು ಹರಿಯುವುದಕ್ಕೆ ಇನ್ನೂ ಸ್ವಲ್ಪ ಹೊತ್ತಿತ್ತು. ಎದ್ದು, ಮಲಗಿರುವ ತಮ್ಮಂದಿರನ್ನು ಮುದ್ದಿಟ್ಟೆ. ತಂದೆಯವರೂ ತಾಯಿಯವರೂ ಮಲಗಿದ್ದ ಕೋಣೆಯ ಹೊಸಲಿಗೆ ನಮಸ್ಕರಿಸಿದೆ. ಅವರ ಪಾದ ಧೂಳಿಯನ್ನು ಕೊನೆಯ ಸಲ ಶಿರಸ್ಸಿನಲ್ಲಿ ಧಾರಣಮಾಡಬೇಕೆಂಬ ಆಸೆಯನ್ನು ಬಹಳ ಕಷ್ಟದಿಂದ ಬಿಗಿ ಹಿಡಿಯಬೇಕಾಯಿತು—ಎಚ್ಚರಗೊಂಡು ನನ್ನ ನಿರ್ಧಾರವನ್ನು ಊಹಿಸಿಕೊಂಡಾರು ಎಂದು. ಸದ್ದಿಲ್ಲದೆ ಬಾಗಿಲು ತೆರೆದು ಹೊರಕ್ಕೆ ಬಂದೆ. ನಮ್ಮೂರಿನಲ್ಲಿ ಅನೇಕ ಕೊಳಗಳಿದ್ದುವು. ಯಾವ ಕೊಳಕ್ಕೆ ಬೀಳುವುದು ಎಂಬ ಯೋಚನೆ ಹುಟ್ಟಿತು. ಆಕಸ್ಮಿಕವಾಗಿ ಕಾಲು ಜಾರಿ ಬಿದ್ದಿರಬೇಕು ಎಂಬ ಸಂದೇಹವನ್ನು ಹುಟ್ಟಿಸುವಂತಹ ಕೊಳವಾಗಿರಬೇಕು ಅದು; ಊರಿಗೆ ಹತ್ತಿರದಲ್ಲಿರಬೇಕು; ನಾನು ಆ ಕೊಳಕ್ಕೆ ಹೋಗುವಂತಹ ಸಂಭವವಿರಬೇಕು. ಹೌದು, ಆ ಶೌಚದ ಕೊಳ. ಅದೇ ಸರಿ. ಆ ಕೊಳದ ಹತ್ತಿರಕ್ಕೆ ಬಂದೆ. ಕೊಳವನ್ನು ನೋಡಿ ನನ್ನೆದೆ ಗಡಗಡನೆ ನಡು

ಗಿತು. ಆ ಕೊಳವನ್ನು ನಿತ್ಯವೂ ನೋಡುತ್ತಿದ್ದೇನೆ. ಆದರೆ ಇಂದು ಅದು ನವೀನವಾಗಿಯೂ ಅತ್ಯಂತ ಭಯಂಕರವಾಗಿಯೂ ಕಂಡಿತು. ಹಸುರು ಪಾಚಿ ನೀರನ್ನೆಲ್ಲಾ ಮುಚ್ಚಿತ್ತು. ಆ ಪಾಚಿಯನ್ನೊಡೆದುಕೊಂಡು ಸಹಸ್ರ ಸಹಸ್ರ ಕ್ರಿಮಿಗಳು ಮುಲುಮುಲುಗುಟ್ಟುವುದಕ್ಕೆ ಪ್ರಾರಂಭಿಸಿದ್ದುವು. ಒಂದು ಮೂಲೆಯಲ್ಲಿ ಊರಿನವರೆಸೆದಿದ್ದ ಶ್ರಾದ್ಧದ ಬಾಳೆಯೆಲೆ ಕೊಳೆತು ನಾರುತ್ತಿತ್ತು. ಇದೇ ಕೊಳದಲ್ಲಿ, ನನ್ನ ಹಾಗೆಯೆ ಬಾಳಿನಲ್ಲಿ ಜಿಹಾಸೆಗೊಂಡು, ನಿರಾಶೆಯಿಂದ ಅನೇಕರು ದೇಹತ್ಯಾಗ ಮಾಡಿದ್ದರು. ಆ ಶವಗಳ ಸ್ಮರಣೆ ಬಂದು ಮೈ ಜುಮ್ಮೆಂದಿತು. ನೀಲಿ ಬಣ್ಣದ ವಿವರ್ಣವಾದ ದೇಹ; ಆ ಕೊಳಚೆಯ ನೀರನ್ನು ಕುಡಿದು ಊದಿದ್ದ ಮುಖ, ಮೈ; ಕಷ್ಟದಿಂದ ಅತಿಕಷ್ಟದಿಂದ ಮರಣದೊಡನೆ ಹೋರಾಡಿ, ದೆಸೆಗೆಟ್ಟು, ಭಯವನ್ನು ಕಾರುವ, ಉತ್ಕ್ರಮಣ ಕಾಲದ ಬಿರುಗಣ್ಣ ನೋಟ! ಎಂತಹ ಬಾಳಿಗೆ ಎಂತಹ ಕೊನೆ! ಅದರಿಂದ ಆದದ್ದು ತಾನೆ ಏನು? ಕೆಲವು ಜನ ಅತ್ತರು, ಕೆಲವರು ಬೈದರು. ಆಮೇಲೆ ಶವವನ್ನು ಹೊತ್ತು ಸುಟ್ಟರು. ಮೃತರನ್ನು ಮರೆತರು. ಸತ್ತುದ್ದರಿಂದ ಲೋಕಕ್ಕೆ ಆದ ನಷ್ಟವೇನು? ಸಾಯುವುದು ಅಂಜುಬುರುಕುತನ. ನಾನು ಸತ್ತು ಏನು ಮಾಡಿದ ಹಾಗಾಯಿತು? ಮೂರ್ತಿಯ ತಂಗಿಗೆ ಮದುವೆ ಆಗುವುದು ತಪ್ಪುತ್ತದೆಯೆ? ನಮ್ಮ ಮನೆಯವರು ಉಂಡು ಮಲಗಿ, . ಬಾಳನ್ನು—ಕಷ್ಟವೋ ನಿಷ್ಠುರವೋ—ನೀಸುವುದು ತಪ್ಪುತ್ತದೆಯೆ? ಮುಪ್ಪಿನ ಕಾಲದಲ್ಲಿ ಅವರಿಗೆ ಗಂಜಿ ನೀಡುವುದಕ್ಕೆ ಹೆದರಿ ಸತ್ತ ಹಾಗೆ ಆಗುತ್ತದೆ. ಮೂರ್ತಿಯನ್ನು ಕಟ್ಟಿಕೊಂಡು ನನಗೇನು? ಉಹು, ನಾನು ಸಾಯುವುದೂ ಇಲ್ಲ, ಮದುವೆಯಾಗುವುದೂ ಇಲ್ಲ.

ಹೀಗೆ ಯೋಚಿಸುತ್ತಾ ಮೆಟ್ಟಲಿನ ಮೇಲೆ ಸ್ವಲ್ಪ ಹೊತ್ತು ಕುಳಿತೆ ಮೈಸೂರಿನಲ್ಲಿ ಮೂರ್ತಿಯ ಮನೆಯ ಚಿತ್ರ ಜ್ಞಾಪಕಕ್ಕೆ ಬಂದಿತು. ಜನರ ಸಡಗರ, ಮೂರ್ತಿಯ ಸಂಭ್ರಮ, ಏನೋ ಕೋಟೆಯನ್ನು ಗೆದ್ದವನಂತೆ ಅವನ ಮುಖದ ಮೇಲಿನ ಗೆಲವು, ಮೂರ್ತಿಯ ತಂಗಿಯ ಮುಖದ ಮೇಲೆ ವಿಕಸಿತವಾಗಿ ಸಂಕುಚಿತವಾಗಿರುವ ನಗೆ, ಮನೆಯಲ್ಲಿ ತುಂಬಿತುಳುಕುವ ಉಲ್ಲಾಸ; ಆಮೇಲೆ ನಾನು ಬಾರದೆ ಇರುವುದನ್ನು ಕಂಡು ಜನರ ತಲ್ಲಣ, ಶ್ಮಶಾನದಿಂದ ಹಿಂತಿರುಗುವವರ ಮುಖದಂತೆ ಒಣಗಿರುವ ಮೂರ್ತಿಯ

ಮುಖ, ಮೂರ್ತಿಯ ತಂಗಿಯ ಕಣ್ಣೀರು—ಕಣ್ಣೀರು! ಉಹು. ಹೆಜ್ಜೆ ಹಿಂದಿಡುವ ಹಾಗಿಲ್ಲ. ಮುಂದಕ್ಕೆ ಹೋಗುವ ಹಾಗೂ ಇಲ್ಲ. ನನಗೆ ಮರಣವೇ ಶರಣು. ಮನೆಯವರು ಕಾಲುಜಾರಿ ಬಿದ್ದನೆಂದು ಸ್ವಲ್ಪ ಅತ್ತು ಸುಮ್ಮನಾಗುತ್ತಾರೆ. ಮೂರ್ತಿಯೂ ಅಷ್ಟೆ, 'ಅಯ್ಯೋ, ಎಂಥಾ ಸ್ನೇಹಿತ, ಅಪಮೃತ್ಯು ಕೊಂಡುಹೋಯಿತೆ' ಎಂದು ಅಳುತ್ತಾನೆ. ಮದುವೆಯೂ ಸಾಂಗವಾಗಿ ನಡೆದುಹೋಗುತ್ತದೆ. ನನ್ನಂಥ ಕ್ರಿಮಿ ಅಳಿದರೇನು? ಸಾಯುವುದೇ ಸರಿ. ಎಂತಹ ಬಾಳಿಗೆ ಎಂತಹ ಗತಿ? ಏನು ತಪ್ಪು ಮಾಡಿದ್ದಕ್ಕೆ?

ಕೊನೆಯ ಸಲ ನಾನು ಸವಿದ ನನ್ನ ಬಾಳಿನ ಸುಖಗಳನ್ನೆಲ್ಲಾ ಜ್ಞಾಪಕಕ್ಕೆ ತಂದುಕೊಂಡೆ. ಹಿಂದಿನ ನೆನಪುಗಳು—ಬಾಲ್ಯಸ್ನೇಹಿತರು—ಆಟಪಾಟಗಳು--ಮೂರ್ತಿಯನ್ನು ಮೊದಲನೆಯ ಸಾರಿ ಕಂಡದ್ದು—ಸ್ನೇಹ ಮೊಳೆತದ್ದು—ಅದು ಗಿಡವಾಗಿ, ಮರವಾಗಿ, ಫಲಿಸಿದ್ದು—ನನ್ನ ಮನೆಯವರಿಗೂ ನನಗೂ ಇರುವ ನಿಕಟವಾದ ಪ್ರೇಮ ಸಂಬಂಧಗಳು—ನನ್ನ ಬಾಳಿನಲ್ಲಿ ನಾನು ಅನುಭವಿಸಬಹುದಾದ, ಸಾಕ್ಷೀಕರಿಸಿಕೊಳ್ಳಬಲ್ಲ, ಭಾವೀ ಸುಖಗಳು, ಧ್ಯೇಯಗಳು—ಇವೆಲ್ಲಾ ಜ್ಞಾಪಕಕ್ಕೆ ಬಂದು ನನ್ನ ಪ್ರಾಣದ ಜಿಲೆಯನ್ನು ನೂರ್ಮಡಿಸಿದವು. ಕೊಳವನ್ನು ನೋಡಿದೆ. ಕೊಳೆತು ನಾರುವ ಹಸುರು ನೀರು ಅತ್ಯಂತ ಅಸಹ್ಯವನ್ನು ಹುಟ್ಟಿಸಿತು. ಇದರಲ್ಲೇಕೆ ನನ್ನ ಬಾಳು ನಂದಬೇಕು? ಥು, ಥು, ಎಲ್ಲಾದರೂ ಸರಿಯೆ, ಇನ್ನೆಲ್ಲಾದರೂ ಸರಿಯೆ, ಇಲ್ಲಿ ಅದು ಅಸಾಧ್ಯ, ಅಸಾಧ್ಯ. ಕೊಳವನ್ನು ಬಿಟ್ಟು ಹೊರಕ್ಕೆ ಹತ್ತಿ ಬಂದು ಇನ್ನೊಂದು ಕೊಳದ ಮಾರ್ಗವನ್ನು ಹಿಡಿದೆ. ಹಾದಿ ಸಾಗುತ್ತಾ ಮರಣಕ್ಕೆ ಧುಮುಕುವ ಉತ್ಸಾಹ ಕಡಮೆಯಾಗುತ್ತಾ ಬಂದಿತು. "ಇಷ್ಟು ಹೊತ್ತಿಗೆ ಮುಂಚೆ ಏಕೆ ಸಾಯಬೇಕು? ನಾನು ಹೊರಡುವುದು ಮಧ್ಯಾಹ್ನಕ್ಕೆ. ನಾಳೆ ಮದುವೆ. ಸಾಯುವುದೊಂದೆ ದಾರಿಯಾದರೆ ಬೇಕಾದಷ್ಟು ಹೊತ್ತಿದೆಯಲ್ಲಾ. ಸ್ವಲ್ಪ ಹೊತ್ತು ಜೀವಿಸೋಣ. ಇಷ್ಟಕ್ಕೂ ಮೂರ್ತಿ ಹುಡುಗಾಟ ಮಾಡುತ್ತಿದ್ದರೆ!" ಎಂಬ ಭಾವನೆ ಹುಟ್ಟಿತು. ಸಾವಿನ ಹೊಸಿಲನ್ನು ಮೆಟ್ಟಿದ್ದ ಆತ್ಮ ಹೆದರಿ ಹಿಮ್ಮೆಟ್ಟಿ ಜೀವವನ್ನು ತಿರುಗಿ ನೆಮ್ಮಿತು. ಆಗ—ಹೌದು—ಆಗ ಹೊಸ ಜೀವ ಬಂದಂತಾಯಿತು. ಆಗ ಉಸಿರೆಳೆಯುವುದೇ ಒಂದು ಆನಂದ. ವಿಷಯಗಳ ಗುಣಾವಗುಣಗಳ ವಿಮರ್ಶೆ ಆಗ ಇಂದ್ರಿಯ

ಗಳಿಗೆ ಬೇಕಿಲ್ಲ. ಪ್ರಪಂಚ ಅತ್ಯಂತ ಸುಖಮಯವಾಗಿ, ಅತ್ಯಂತ ಸುಂದರ ವಾಗಿ, ನಿಷ್ಕಳಂಕವಾಗಿ ಕಂಡಿತು. ಆಗ ತಾನೆ ಬೆಳಕು ಹರಿಯುತ್ತಿತ್ತು. ಮೂಡಲು ಸ್ವಲ್ಪ ಬಿಳುಪೇರಿತ್ತು. ಜಗತ್ತು ಎಚ್ಚರಗೊಳ್ಳುವುದಕ್ಕೆ ಪೂರ್ವ ಭಾವಿಯಾದ ಅರೆನಿದ್ದೆಯಲ್ಲಿರುವಂತೆ ತೋರಿತು. ಬಿಳಿ ಚಾಯೆಯ ನೀಲ ದುಕೂಲದಲ್ಲಿ ನೆಯ್ದಿರುವ ಜರತಾರಿಯ ಚುಕ್ಕಿಗಳಂತೆ ಅಲ್ಲಿ ಇಲ್ಲಿ ಮ್ಲಾನ ನಕ್ಷತ್ರಗಳು ಮಿನುಗುತ್ತಿದ್ದುವು. ಎಚ್ಚತ್ತ ಒಂದೆರಡು ಹಕ್ಕಿಗಳ ಇಂಚರವೂ, ಅರಳುತ್ತಿರುವ ವನಕುಸುಮಗಳ ಕಂಪೂ, ಬ್ರಾಹ್ಮಮುಹೂರ್ತದ ಕುಳಿ ರ್ಗಾಳಿಯೂ, ಪ್ರಶಾಂತವಾಗಿ ನಿರಭ್ರವಾದ ಆಕಾಶವೂ, ಮೂಡುವುದರಲ್ಲಿ ರುವ ಸುಪ್ರಭಾತದ ಮನೋಹರತೆಯ ಬೇಹುಗಾರರಾಗಿದ್ದುವು. ಇನ್ನೊಂದು ಕ್ಷಣದಲ್ಲಿ ಜಗತ್ತು ಎಚ್ಚರಗೊಳ್ಳುತ್ತದೆ. ಮೂಡಲರಳುತ್ತದೆ. ಜೀವ ಹರಿ ಯುತ್ತದೆ. ನನ್ನದೇಕೆ ನಂದಬೇಕು? ನನ್ನ ಬಾಳನ್ನು ಸಮಷ್ಟಿ ಜೀವನದ ಹೊನಲಿನಲ್ಲಿ ಬೆರಸುತ್ತೇನೆ. ಅದರ ಅಲೆಗಳೊಂದಿಗೆ ನನ್ನದೂ ಬೆರೆದು ಕುಣಿದು ಸಾಗಲಿ. ಈ ಯಾತ್ರೆಯಲ್ಲಿ, ನನ್ನ ದುಃಖವೆಷ್ಟರದು?

ಅಂದು ನಾನು ನೆಟ್ಟನೆ ಹಿಂತಿರುಗಿ ಮನೆಗೆ ಹೋಗಲಿಲ್ಲ. ವಿಶ್ವದ ಜೀವದೊಡನೆ, ಆನಂದದೊಡನೆ, ನನ್ನದನ್ನು ಬೆರಸಿ, ಚಿಂತೆಯನ್ನು ತೇಲಿ ಬಿಡಬೇಕೆಂದು ಬೆಟ್ಟಗುಡ್ಡಗಳನ್ನೆಲ್ಲಾ ಸುತ್ತಿದೆ. ಕೆಲವು ಗಂಟೆಗಳಲ್ಲಿ ಒಂದು ಬಾಳನ್ನು ಬಾಳಿದೆ. ಆತ್ಮ ಹಗುರವಾಯಿತು, ನಿರಾಶೆಯಲ್ಲಿ ಆಸೆ ಹುಟ್ಟಿತು.

ಬಿಸಿಲೇರಿತು. ಮನೆಗೆ ಹಿಂತಿರುಗಿದೆ.

ಮನೆಯ ಹತ್ತಿರಕ್ಕೆ ಬರುತ್ತಾ ಬರುತ್ತಾ ಮನಸ್ಸು ತಿರುಗಿ ಭಾರ ವಾಯಿತು. ಚಿಂತೆ ಮುಸಗಿತು. ಆದರೆ, ಮೂರ್ತಿಯಿಂದ ಕಾಗದ ಬಂದಿರ ಬಹುದೆಂಬ ನಚ್ಚು ಸ್ವಲ್ಪ ಸ್ವಲ್ಪ ಚಿಂತೆಯ ಇರುಳಿನಲ್ಲಿ ಮಿನಗುತ್ತಿತ್ತು.

ಮನೆಗೆ ಬಂದು "ಕಾಗದವೇನೂ ಬರಲಿಲ್ಲವೇನಮ್ಮಾ?" ಎಂದು ಆತುರದಿಂದ ತಾಯಿಯವರನ್ನು ಕೇಳಿದೆ. "ಕಾಗದ ಇರಲಿ ಕಣೋ. ನೀನೆಲ್ಲಿಗೆ ಹೋಗಿದ್ದೆಯೋ ಇಷ್ಟು ಹೊತ್ತು? ಮನೆಯವರು ಗಾಬರಿ ಬಿದ್ದು ಕೊಳ ಹುಡುಕುತ್ತಾ ಇದಾರೆ. ಸರಿ, ಸರಿ" ಎಂದರು. ನನಗೆ ಸಿಟ್ಟು ಬಂತು. "ನಾನು ಹೋದರೆ ಏನು ನಷ್ಟಾಮ್ಮ? ಕಾಗದ ಬಂದಿದೆಯೆ ಎಂದು ಕೇಳಿ

ದರೆ ಏನೇನೋ ಮಾತು" ಎಂದೆ. ಅವರಿಗೂ ಸಿಟ್ಟು ಬಂತು. "ಏನು ಕೊಳ್ಳಿ ಹೋಗುವ ಆಫೀಸರ್‌ಗಿರಿಯೋ ಇವನಿಗೆ. ಹೂ, ಬಂದಿದೆ. ಕಿಟ್ಟು ಎಲ್ಲೋ ಇಟ್ಟಿದ್ದಾನೆ—ಅಂಗಡಿಗೆ ಹೋಗಿದಾನೆ—ಬಂದು ಕೊಡುತ್ತಾನೆ" ಎಂದವರು ಸರ್ರನೆ ಒಳಕ್ಕೆ ಹೊರಟುಹೋದರು. ನಾನು ತಳಮಳಿಸಿದೆ, ಕಿಟ್ಟುವನ್ನು ಶಪಿಸಿದೆ. ಕಿಟ್ಟು ಬರುವುದು ಸ್ವಲ್ಪ ತಡವಾಯಿತು. "ಎಲ್ಲೋ ಕಾಗದ ಬಂತಂತಲ್ಲೊ ?" ಎಂದೆ. ಕಿಟ್ಟು ಕಾಗದ ಕೈಯಲ್ಲಿ ಕೊಟ್ಟ. ನಾನು ಊಹಿಸಿದಂತೆ ಮೂರ್ತಿಯಿಂದ—ಕವರು: ಅರಿಶಿನ ಹಚ್ಚಿತ್ತು. ಆತುರ ದಿಂದ ಒಡೆದು ಓದಿದೆ.

ಕೋಪದಿಂದ ಸರ್ವಾಂಗವೂ ನಡುಗಿತು. ಮೂರ್ತಿಯ ಮೇಲೆ ಅತ್ಯಂತ ದ್ವೇಷ ಹುಟ್ಟಿತು. ಆತ ಆಗ ಹತ್ತಿರದಲ್ಲಿದ್ದಿದ್ದರೆ ಅವನು ಹೇಳುವ ಹಾಗೆ ಸ್ವಲ್ಪವೂ ಅಳುಕಿಲ್ಲದೆ ಅವನನ್ನು ಇರಿದು ಕೊಂದುಬಿಟ್ಟು ಕೈಯೊರಸಿ ಕೊಂಡುಬಿಡುತ್ತಿದ್ದೆ. ನನ್ನ ಜೀವನವನ್ನು ಹೀಗೆ ಕವಡೆಯಾಟ ಆಡುವುದೆ? ಎಂಥ ನೀಚತನ! ಹೀಗೆಯೆ ಹುಡುಗಾಟ ಮಾಡುವುದು?

ಸ್ವಲ್ಪ ಹೊತ್ತಿನ ಮೇಲೆ ಸಿಟ್ಟಿಳಿಯಿತು. ನನ್ನ ಎರಡು ಮೂರು ದಿನ ಗಳ ಬವಣೆಗಳನ್ನೆಲ್ಲಾ ನೆನೆದುಕೊಂಡೆ. ನನ್ನ ಬಾಳು ಸಾವಿನ ಹೊಸಿಲನ್ನು ಮೆಟ್ಟಿತ್ತು. ಏತಕ್ಕೆ—ಏತಕ್ಕೆ? ಇದಕ್ಕೇ? ಇದಕ್ಕೇ?

ನನಗೇ ಬಹಳ ನಗು ಬಂತು.

ಆಮೇಲೆ, ಮೂರ್ತಿಯ ತಂಗಿಯನ್ನು ನೆನೆದುಕೊಂಡೆ. ನಾನು ಅವ ಳನ್ನು ನಿಜವಾಗಿ ಅಂತರ್ಯವಾಗಿ ಪ್ರೀತಿಸುತ್ತಿದ್ದೆನೆಂದು ಆಗ ತೋರಿತು. ಇನ್ನು ನನಗೂ ಅವಳಿಗೂ ಏನು ಸಂಬಂಧ?

ಒಂದು ದೊಡ್ಡ ನಿಟ್ಟುಸಿರನ್ನು ಬಿಟ್ಟೆ.

ಕಾಗದದ ಒಕ್ಕಣೆ ಈ ರೀತಿಯಲ್ಲಿತ್ತು:

"ನಾಣಿ, ಈ ಕಾಗದ ನೋಡಿ ನಿನಗೆ ಬಹಳ ಕೋಪ ಬರುತ್ತೆ, ನನಗೆ ಗೊತ್ತು. ನಾನು ನಿನ್ನ ಹತ್ತಿರ ಇಲ್ಲದೆ, ಮೈಸೂರಿನಿಂದ ಈ ಕಾಗದವನ್ನು ಘೂಬಿಡುವುದು ನಮ್ಮಿಬ್ಬರಿಗೂ ಕ್ಷೇಮ. ಹತ್ತಿರದಲ್ಲಿದ್ದಿದ್ದರೆ ನೀನು ಏನು ಮಾಡಿಬಿಡುತ್ತಿದ್ದೆಯೊ. ನೀನು 'Inter-communal marriage' ವಿಚಾರವಾಗಿ ಲೆಕ್ಚರು ಕೊಡುವಾಗಲೆಲ್ಲಾ ನಮ್ಮ ಅಂಜೆಯ ಜ್ಞಾಪಕ ಬರು

ತ್ತಿತ್ತು. ನನಗೇನೊ ಅಂಬೆಯನ್ನು ನಿನಗೆ ಕೊಡಬೇಕೆಂದು ಬಹಳ ಆಸೆ ಇತ್ತು. ಅದೆಲ್ಲಿ ನಡೆಯುತ್ತೆ? ನನ್ನ ಮೊದಲನೆಯ ಕಾಗದದ ಮೇರೆ ನೀನು ಹೇಗಿದ್ದರೂ ಮೈಸೂರಿಗೆ ಬರುತ್ತೀಯಲ್ಲಾ, ಆಗ ಎಲ್ಲಾ ಹೇಳೋಣ ಎಂದುಕೊಂಡು ಈ ಕಾಗದ ಬರೆಯದೆ ಸುಮ್ಮನಿರಬೇಕೆಂದಿದ್ದೆ. ಏನೋ ಗಾಬರಿಯಾಯಿತು. ನಿನಗೆ ಮೊದಲೆ ತಿಳಿಸಿಬಿಟ್ಟರೆ ವಾಸಿ ಎಂದುಕೊಂಡು ಈ ಕಾಗದ ಬರೆದೆ. ಕೋಪಿಸಿಕೊಳ್ಳಬೇಡ, ಮಗು. ಮದುವೆಗೆ ಬಾರದೆ ಇರಬೇಡ. ನಿನಗೆ ಹೇಳತಕ್ಕ ಸಮಾಚಾರಗಳೆಷ್ಟೋ ಇವೆ. ನಾನು ಈಗ ಆವಾಂತರದಲ್ಲಿದ್ದೇನೆ. ಹೆಚ್ಚು ಬರೆಯುವುದಕ್ಕೆ ಪುರಸತ್ತಿಲ್ಲ. ತಮಾಷೆ ಮಾಡಿದ್ದನ್ನು ಕ್ಷಮಿಸು. ನೀನೂ ಹುಡುಗಾಟವೆಂದೇ ಭಾವಿಸಿಕೊಂಡೆ ತಾನೆ? ನಿನ್ನಂಥ 'Day-dreamer' ಗೆ ಒಂದು 'dose' ಕೊಡೋಣ ಅಂತಲೂ ಆ ಕಾಗದ ಬರೆದೆ. ಕ್ಷಮಿಸು; ಕ್ಷಮಿಸಿದ್ದನ್ನು ಅಪ್ಪಿ ತೋರಿಸಲು ಓಡಿಬಾ, ಮಗು."

ಲಗ್ನಪತ್ರಿಕೆಯಲ್ಲಿ ನಾಳೆ ಸೋಮವಾರವೇ ಅಂಬೆಯನ್ನು ಯಾವನೋ ಒಬ್ಬ ಸಾಲಿಗ್ರಾಮದ ಸುಬ್ರಹ್ಮಣ್ಯನಿಗೆ ಕೊಟ್ಟು ಬೆಳಸುವ ವಿವಾಹ ಮಹೋತ್ಸವಕ್ಕೆ ಆಹ್ವಾನವಿತ್ತು.

# ವೆಂಕೋಬರಾಯರು ಒಂದು ಪದ್ಯವನ್ನು ಓದಿ ವಿಮರ್ಶಿಸಿದ್ದು

ವೆಂಕೋಬರಾಯರಿಗೆ ವಯಸ್ಸಾಗುತ್ತಾ ಬಂದಿತ್ತು. ಗಡ್ಡದಲ್ಲಿ ನರೆ ಕಾಣಿಸಿಕೊಂಡು ಮೀಸೆಗೆ ಏರುವುದರಲ್ಲಿತ್ತು. ಹಳೆಯ ಕಾಲದ ಮನುಷ್ಯ ಆತ. ಅವರ ಮನೋಭಾವವೂ ಅಷ್ಟೆ. ಅವರಿಗೆ ಹೊಸದರಲ್ಲಿ ಉತ್ಸಾಹ ವಿಲ್ಲ—ಜುಗುಪ್ಸೆ. 'ಹಳೆಯದೆಲ್ಲವೂ ಗಟ್ಟಿ; ಹೊಸದರಲ್ಲಿ ತಿರುಳಿಲ್ಲ, ಟೊಳ್ಳು' ಎನ್ನುವವರು ಅವರು. ಅದರಲ್ಲೂ ಆಧುನಿಕ ಸಾಹಿತ್ಯದಲ್ಲಂತೂ ಅವರಿಗೆ ತೀರ ತಿರಸ್ಕಾರ. ಅವರೇನು ಗೊಡ್ಡು ವೈದಿಕರಲ್ಲ. ಅವರಿಗೆ ಇಂಗ್ಲೀಷೂ ಬರು ತ್ತಿತ್ತು. ಒಳ್ಳೆಯ ರಸಿಕರೆಂದೇ ಹೇಳಬೇಕು. ಅನುಭವಶಾಲಿಗಳು, ದೊಡ್ಡ ಸಂಸಾರಿಗಳು, ಕಷ್ಟದಲ್ಲಿ ಸುರಿತವರು. ಹಳಗನ್ನಡ ಸಾಹಿತ್ಯದಲ್ಲೂ ಸಂಸ್ಕೃತ ಸಾಹಿತ್ಯದಲ್ಲೂ ಅವರಿಗೆ ಪರಿಶ್ರಮ ಚೆನ್ನಾಗಿತ್ತು. ಅವರು ಇಂಗ್ಲೀಷು ಕಲಿ ತಿದ್ದು ಕೇವಲ ಕುಟುಂಬ ಭರಣಕ್ಕೆಂದು. ಆ ವಿದ್ಯೆಯಲ್ಲಿ ಅವರಿಗೆ ಆಸಕ್ತಿ ಇಲ್ಲ. ನಮ್ಮ ಪುರಾತನ ಸಂಸ್ಕೃತಿಯಲ್ಲಿ ಅವರಿಗೆ ಹಿರಿಯ ಹೆಮ್ಮೆ. 'ಸಂಸ್ಕೃತ ಸಾಹಿತ್ಯಕ್ಕಿಂತಲೂ ಆರ್ಯ ಸಂಸ್ಕೃತಿಗಿಂತಲೂ ಉತ್ತಮವಾದದ್ದು ಇನ್ನು ಉಂಟೆ? ಈಗಿನವರು ಎಂಥ ಕುರುಡರು!' ಎಂದು ಅವರ ಸಂಜಿಕೆ ಆಶ್ಚರ್ಯಪಡುತ್ತಿತ್ತು. 'ಈಚಿನವರೆಲ್ಲರೂ, ಹೊಸ ಜನರ, ಹೊಸ ಸಂಸ್ಕೃತಿಯ, ಸೆಳವಿಗೆ ಸಿಕ್ಕಿ ಕೊಚ್ಚಿಹೋಗುತ್ತಿದ್ದಾರೆ' ಎಂದು ಅವರು ಅನುಕಂಪಗೊಂಡಿ ದ್ದರು. ನವೀನರನ್ನು ಕಂಡರೆ ಅವರಿಗೆ ಅಪಾರವಾದ ಮರುಕ; ಗೌರವವಿಲ್ಲ. ಈಗಿನ ಬರಹಗಾರರನ್ನು ಕಂಡರಂತೂ ಅವರಿಗೆ ಆಗದೇ ಆಗದು. ಹೊಸ ಪುಸ್ತಕಗಳನ್ನು ಕಣ್ಣೆತ್ತಿ ನೋಡುವುದೂ ಕೈಮುಟ್ಟಿ ಓದುವುದೂ ಸ್ವಾಭಿಮಾನಕ್ಕೆ ಕುಂದು ಎಂದು ಅವರ ಭಾವನೆ. 'ಇವರಿಗೇನು ಬರೆಯುವುದಕ್ಕೆ ಬರುತ್ತೆ ಮಣ್ಣು. ಇವರೇನು ಋಷಿಗಳು ಕೆಟ್ಟುಹೋದರೆ? ಕಾವ್ಯರಚನೆ ಎಂದರೆ ಸಾಮಾ ನ್ಯವೆ? ಅದೊಂದು ತಪಸ್ಸು....ತಪಸ್ಸು. ಸಂಯಮಿಗಳಿಗೂ, ಋಷಿಗಳಿಗೂ ವರಪ್ರಸಾದದಿಂದ ಲಭ್ಯವಾಗುವ ಶಕ್ತಿ. ಊ್ಹ. ಈ ದುರ್ವಿದಗ್ಧರಿಗೆ,

ಅವಿನೀತರಿಗೆ ಏನು ಗೊತ್ತು? ಇದೊಂದು ಹುಚ್ಚರ ಯುಗ; ಥಳುಕಿನ ಕಾಲ, ಉ್ಞ—' ಎನ್ನುವರು.

ಪಾಪ, ವೆಂಕೋಬರಾಯರಿಗೆ ಹರೆಯ ಕಳೆದಿತ್ತು.

ಇದಕ್ಕೇ ಗ್ರಹಚಾರ ಎನ್ನುವುದು. ಇಂಥ ಪ್ರಾಚೀನರ ಕೈಯಲ್ಲಿ ಹೊಸ ಹೊಸ ಪುಸ್ತಕಗಳು ಪ್ರಕಟವಾಗುತ್ತಿದ್ದ ಹಾಗೆಯೆ ಬಂದು ಬೀಳ ಬೇಕೆ? ಅದು ಅವರ ಮಗನ ಚೇಷ್ಟೆ. ಈ ನವೀನ ಸಂಸ್ಕೃತಿಯ ಸೆಳವಿಗೆ ಸಿಕ್ಕಿ ವೆಂಕೋಬರಾಯರ ಅನುಕಂಪಕ್ಕೆ ಪಾತ್ರರಾದವರಲ್ಲಿ ಇವನೂ ಒಬ್ಬ. ಬೆಳೆದು ಕೈಗೆ ಬಂದ ಒಬ್ಬನೇ ಮಗ. ಮಗನಿಗೂ ತಂದೆಗೂ ಬಹಳ ಸ್ನೇಹ. ನವೀನ ಸಾಹಿತ್ಯವನ್ನು ಕಂಡರೆ ಮಗನಿಗೆ ಬಲು ಮೆಚ್ಚು. ಆತನೂ ಒಬ್ಬ ಕವಿ. 'ವನಮಾಲಿ' ಎಂಬ ಹೆಸರಿನಿಂದ ಅನೇಕ ಕವನಗಳನ್ನು ಬರೆದು ರಸಿಕ ರಿಗೆ ಪ್ರಿಯನಾಗಿದ್ದನು. ಇವನು ಕವಿಯೆಂಬ ವಿಷಯ ತಂದೆಗೆ ತಿಳಿಯದು. ತನ್ನ ತಂದೆಯವರು ತನ್ನ ಕವನಗಳನ್ನೋದಿ ಸಂತೋಷಪಡಬೇಕೆಂದು ಮಗನಿಗೆ ಬಹಳ ಆಸೆ. ತೋರಿಸುವುದಕ್ಕೆ ಸಂಕೋಚ, ಮತ್ತು ಅಲ್ಲಗಳೆದಾರು ಎಂಬ ಭಯ. ಅದಕ್ಕೋಸ್ಕರ ತಾನು ಕೊಂಡುಕೊಂಡು ಬಂದ ಪುಸ್ತಕಗಳ ಜೊತೆಯಲ್ಲಿ ಆಗತಾನೆ ಹೊರಬಿದ್ದಿದ್ದ ತನ್ನ ಕವನಗಳ ಪುಸ್ತಕಗಳನ್ನೂ ಸೇರಿಸಿ, ಅವರ ಮೇಜಿನ ಮೇಲೆ ಇಟ್ಟಿದ್ದನು. ಮೇಜಿನ ಮೇಲೆ ರಾಯರು ಹರಡಿದ್ದ ರಾಮಾಯಣ, ಭಾರತ, ಗೀತೆ ಇವುಗಳ ಜೊತೆಯಲ್ಲಿ ಇವೂ ಬೆರೆದುಹೋಗುತ್ತಿದ್ದುವು. ತಂದೆಗೆ ಇದನ್ನು ನೋಡಿ ಬಹಳ ಅಸಮಾಧಾನ ವಾಗುತ್ತಿತ್ತು. "ಮಗು, ನಿಮ್ಮ ಸ್ನೇಹಿತರು ಬರೆದದ್ದನ್ನು ನೀನು ಓದಿ ಬೇಕಾ ದಷ್ಟು ಸಂತೋಷಪಡಪ್ಪ; ನಾನು ಬೇಡಾ ಅನ್ನೋದಿಲ್ಲ. ನನಗೇಕಯ್ಯಾ, ಈ ಘೋರ. 'ಉದ್ಯಾನವನ—ಉದ್ಯಾನವನ' ಎಂದು ನೀನು ಅನ್ನುವು ದನ್ನು ಕೇಳಿ ನನ್ನ ತಲೆ ಚಿಟ್ಟು ಹಿಡಿದುಹೋಗಿದೆ. ನನಗೆ ಬೇಡವೋ ಈ ನಿರ್ಗಂಧ ಕುಸುಮಗಳ ಉದ್ಯಾನವನದಲ್ಲಿ ವಿಹಾರ!" ಎಂದು ಎಷ್ಟೋ ಸಲ ಮಗನಿಗೆ ಹೇಳಿದ್ದರು. "ಅಣ್ಣಯ್ಯ, ಓದಿದರೆ ಆ ಸ್ವಾರಸ್ಯ ಗೊತ್ತಾಗುತ್ತೆ; ಓದದೆ ಹೇಗೆ ತಿಳಿಯುತ್ತೆ? ಆ ವನಮಾಲಿ ಬರೆದ ಕವಿತೆಗಳನ್ನು ಓದು. ಆಗ ಈ ಕಾಲದವರ ಕವಿತೆಯ ಸ್ವಾರಸ್ಯ ತಿಳಿಯುತ್ತೆ" ಎಂದು ತನ್ನ ಆಸೆ ಯನ್ನು ತಡೆಯಲಾರದೆ, ಸಂಕೋಚದಿಂದ ಒಂದು ದಿನ ಇವನು ಸೂಚಿ

ಸಿದ್ದ. ಆ ರಾತ್ರಿ ವೆಂಕೋಬರಾಯರು ತಮ್ಮ ಮೇಜಿನ ಮೇಲಿದ್ದ ಪುಸ್ತಕಗಳ ತಳದಿಂದ 'ವನಮಾಲಿ'ಯ ಕವನಗಳನ್ನು ಪುರಸತ್ತಾದಾಗ ಓದೋಣವೆಂದು ಮೇಲಕ್ಕೆ ಎತ್ತಿ ಇಟ್ಟಿದ್ದರು. ಮಾರನೆಯ ದಿನ ಬೆಳಗ್ಗೆ ತಂದೆಯ ಮೇಜಿನ ಮೇಲೆ ಎದ್ದು ಕಾಣುವಂತೆ ಇದ್ದ ತನ್ನ ಪುಸ್ತಕವನ್ನು ಕಂಡು ಅವರ ಮಗನಿಗೆ ಬಹಳ ಸಂತೋಷವಾಯಿತು. ಆದರೆ ಒಂದು ವಾರದ ವರೆಗೂ ಆ ಪುಸ್ತಕ ಇಟ್ಟ ಜಾಗದಿಂದ ಕದಲಿರಲಿಲ್ಲ.

(೨)

ಕವನಗಳ ಪುಸ್ತಕ ವೆಂಕೋಬರಾಯರ ಮೇಜಿನ ಮೇಲಕ್ಕೆ ಬಂದು ಒಂದು ವಾರವಾಗಿತ್ತು. ವೆಂಕೋಬರಾಯರು ಕುರ್ಚಿಯ ಮೇಲೆ ಕುಳಿತುಕೊಂಡು ಆ ಪುಸ್ತಕದ ಹಾಳೆಗಳನ್ನು ಅಡ್ಡಜ್ಞಾನದಿಂದ ತಿರುವಿ ಹಾಕುತ್ತಾ, ಏನೋ ಯೋಚಿಸುತ್ತಿದ್ದರು. ಎಂದಿನಂತೆ ಅವರ ಮನಸ್ಸು ಉಲ್ಲಾಸದಿಂದಿರಲಿಲ್ಲ; ಬಾಳಿನಲ್ಲಿ ಉತ್ಸಾಹ ಸ್ವಲ್ಪ ಕುಗ್ಗಿತ್ತು. ಇಷ್ಟು ದಿನಗಳವರೆಗೂ ಅವರು ಮರಣವನ್ನು ಕುರಿತು ಯೋಚಿಸಿರಲಿಲ್ಲ. ಜೀವನ ಸರಳವಾಗಿ, ಉತ್ಸಾಹಪೂರ್ಣವಾಗಿ ಸಾಗಿತ್ತು. ಆಗ ಈಗಿನ ಸಾಂಸಾರಿಕ ಕ್ಲೇಶಗಳು ಅವರ ಉಲ್ಲಾಸವನ್ನು ಕುಗ್ಗಿಸಿರಲಿಲ್ಲ. ಇವು ಅವರ ಬದುಕಿನ ಬೆಲೆಯನ್ನು ಹೆಚ್ಚಿಸಿ ಉತ್ಸಾಹವನ್ನು ಇಮ್ಮಡಿಸಿದ್ದವು. 'ಕ್ಲೇಶಗಳೊಡನೆ ಹೆಣಗಿ, ಹೋರಾಡಿ, ಜಯಶಾಲಿಗಳಾಗಿ ತಮ್ಮವರಿಗೆ ಉಪಕಾರಿಯಾಗಿರುವುದು ತಾನೆ ತಾನು ಜೀವಿಸಿರುವುದರ ಪ್ರಯೋಜನ. ಈ ಕ್ಲೇಶಗಳಿಲ್ಲದೆ ಹೋದರೆ ಬಾಳಿನ ಸಾರ್ಥಕತೆ ಹೇಗೆ ಆಗುತ್ತದೆ?' ಎಂದು ಅವರ ತರ್ಕ. ಈಚೀಚೆಗೆ ಅವರ ಮನಸ್ಸಿನ ಮತ್ತು ದೇಹದ ಶಕ್ತಿ ಕುಂದಿತ್ತು. ಹೀಗೆ ಕುಂದಿಹೋಗುತ್ತಿರುವುದರ ಅರಿವೂ ಅವರಿಗೆ ಸ್ವಲ್ಪ ಸ್ವಲ್ಪ ಹುಟ್ಟಿತ್ತು. 'ತಮ್ಮ ಬದುಕು ನಿಷ್ಪ್ರಯೋಜಕವಾಗಿ ಬರಹತ್ತಿದೆ' ಎಂಬ ಭಾವ ಮೆಲ್ಲನೆ ಮೆಲ್ಲನೆ ಅವರ ಮನಸ್ಸಿನಲ್ಲಿ ಮೊಳೆತು ಬೆಳೆಯುತ್ತಿತ್ತು. ಈ ದಿನ ಈ ಭಾವ ಪರಿಸ್ಫುಟವಾಗಿ ಅವರನ್ನು ಕ್ಷುಣ್ಣರನ್ನಾಗಿ ಮಾಡಿತ್ತು. ಮರಣದ ಕನಸನ್ನು ಮೊದಲನೆಯ ಸಾರಿ ಈದಿನ ಅವರು ಕಂಡು ಹೆದರಿದ್ದರು. ಕಿಟಕಿಯಿಂದ ನುಸಿದು ಆಚೆಯ ಗೋಡೆಯ ಮೇಲೆ ಚೌಕವಾಗಿ ಬಿದ್ದ ಸಂಜೆಯ ಹೊನ್ನ ಬೆಳಕು ಈ ಕನಸನ್ನು ತಂದಿತ್ತು. ಕ್ಷಣಕ್ಷಣಕ್ಕೂ ಮಂಕಾಗಿ,

ಹಣ್ಣಾಗಿ, ಹಳದಿಯಾಗಿ, ಕೆಂಪಗೆ ತಿರುಗಿ, ಕಡುಗೆಂಪಾಗಿ, ಆಮೇಲೆ ಮೆಲ್ಲನೆ —ಬಲುಮೆಲ್ಲನೆ—ಕ್ಷೀಣವಾಗಿ, ಕೊನೆಗೆ ಆ ಬೆಳಕು ನಂದಿಹೋಗಿತ್ತು. ಅವರ ಬಾಳೂ ಅಷ್ಟೆ. ಯಾವತ್ತಾದರೊಂದು ದಿನ—ಅದರಲ್ಲಿ ಸಂದೇಹ ವಿಲ್ಲ—ಆ ಬೆಳಕಿನಂತೆ ಹಣ್ಣಾಗಿ ನಂದಬೇಕು. ಈಗ ಅವರ ಬಾಳು ಮಾಗು ತ್ತಿದೆ. ಇನ್ನೇನು ಕಳಿತು ಬೀಳುವ ಕಾಲ ಸನ್ನಿಹಿತವಾಗುತ್ತಿದೆ. ಅವರು ಜೀವಿಸಿದ್ದು ಏನು ಮಾಡಿದ ಹಾಗಾಯಿತು? ಯಾವ ಫಲವನ್ನು ಹೊಂದಿ ಕೃತಾರ್ಥರಾದಂತಾಯಿತು? ಅವರು ಹುಟ್ಟಿದಂದಿನಿಂದ ಅವರ ಬದುಕು ಒಂದಾಸೆಯ ಮೇಲೆ ಮತ್ತೊಂದಾಸೆಯನ್ನು ತೀರಿಸುವ ಪ್ರಯತ್ನದಲ್ಲೇ ಸಾಗಿತ್ತು. ಈ ಆಶಾಪೂರಣ ಪ್ರೇರಣವೇ ಅವರ ಬಾಳನ್ನು ಹೊತ್ತಿಸಿ ಉರಿ ಯನ್ನು ಈವರೆಗೆ ಬೆಳಸಿತ್ತು. ಅವರ ಜೀವನ ಈ ಕ್ಷಣದಲ್ಲಿ ಒಂದು ಆಸೆಗೆ ಅಂಟಿಕೊಂಡಿದ್ದರೆ ಅದು ಪೂರ್ಣವಾದ ಮರುಕ್ಷಣವೇ ಇನ್ನೊಂದಕ್ಕೆ ಅಂಟಿ ಕೊಳ್ಳುವುದು. ಅವರ ಪ್ರೇಮವೂ ಅಷ್ಟೆ— ಅವರ ಆಸೆಯನ್ನು ಅವ ಲಂಬಿಸಿ ಅಷ್ಟೇ ಚಂಚಲವಾಗಿತ್ತು. ಆದರೆ ಯಾವ ಆಸೆಯೂ, ಯಾವ ಒಲುಮೆಯೂ, ಅವರ ಜೀವನದೊಡನೆ ಬೆಳೆದು ಬಂದಿರಲಿಲ್ಲ. ಬಾಳಿನ ಅರಕೆ ತುಂಬದೆ ಯಾವಾಗಲೂ ಉಳಿದಿರುವಂತೆ ತೋರುತ್ತಿತ್ತು. ಹಾಗಾದರೆ ಬಾಳಿನ ಅರ್ಥವೇನು? ಹೀಗೆ ಒಲಿದು, ಉರಿದು, ಕೊನೆಗೆ ನಂದುವುದೆ? ವೆಂಕೋಬರಾಯರಿಗೆ ಬಾಳಿನ ಗುಟ್ಟು ಹರಿಯಲಿಲ್ಲ.

"ಊ್ಞ, ಬಂದ ಕಾಲಕ್ಕೆ ಬಂದೇ ಬರುತ್ತದೆ. ಬೇಡ ಅಂದರೆ ನಿಲ್ಲು ತ್ತದೆಯೆ? ಅದೊಂದು ಪ್ರಕೃತಿಯ ಧರ್ಮ. ಉಸಿರಿರುವವರೆಗೂ ಎಳೆ ಯೋಣ. ಊ್ಞ, ಇನ್ನೇಕೆ ಅದರ ಚಿಂತೆ?" ಎಂದುಕೊಂಡು ಮೃತ್ಯುವಿನ ಚಿಂತೆಯನ್ನು ಹೊರಗಟ್ಟಿಬಿಟ್ಟರು.

"ಇನ್ನು ವನಮಾಲಿ ಏನು ಬರೆದಿದಾನೋ ನೋಡೋಣ" ಎಂದು, ಪುಸ್ತಕದ ವಿಷಯಾನುಕ್ರಮಣಿಕೆಯನ್ನು ತೆರೆದು ಓದುವುದಕ್ಕೆ ಪ್ರಾರಂಭಿ ಸಿದರು.

(೩)

"ಇವರಿಗೆ ಇನ್ನೇನು ಕೆಲಸ: ಕಾಡುಹೂವು, ಹೆಬ್ಬಾವು, ಜಲಪಾತ, ಕನಸಿನ ನಾಡು .... ಏನೇನೋ ಕಗ್ಗಗಳು .... ಯಾರಿಗೆ ಬೇಕಿವೆ....ಯಾವ

ಸಾರ್ಥಕಕ್ಕೆ....ಮುಂದಕ್ಕೆ...'ಬಾಳಿನ ಹಂಬಲು'—ಬಾಳಿನ....ಹಂಬಲು ...ಏನೋ ಸ್ವಾರಸ್ಯವಾಗಿ ಇರುವ ಹಾಗೆ ಕಾಣಿಸುತ್ತೆ. ಚೋಟುದ್ದದವನು 'ಬಾಳಿನ ಹಂಬಲ' ಮೇಲೆ ಏನು ಬರೆದಿದಾನೋ ನೋಡೋಣ–ಇನ್ನೇನು ಈಗಿನವರ ಬಾಳಿನ ಹಂಬಲ—ಹೆಣ್ಣು ತಾನೆ....ಊ್ಞ...."

ಪುಟ ೪೫.

## ಬಾಳಿನ ಹಂಬಲು

ಕೂಸಿಗಂದು ಏನು ಬೇಡ,
ಗೊಂಬೆ, ತಿಂಡಿ, ಮುದ್ದು ಬೇಡ;
ಅಣ್ಣಬೇಡ, ಅಪ್ಪಬೇಡ—ಅತ್ತು ಸೊರಗಿತು.
"ಅಮ್ಮ ಎಲ್ಲಿ ಹೋತು?" ಎನುತ ಅತ್ತು ಸೊರಗಿತು.

"ಏನು ಪದ್ಯ, ಇದು. ಅಯ್ಯೋ ಪದ್ಯವೆ! ಅಯ್ಯೋ, ಕವಿ, 'ವನಮಾಲಿ!' ಅತ್ತು ಸೊರಗುವ ಕವಿತ್ವ. ಇದೇನೊ ಬಾಳಿನ ಹಂಬಲ—ಮಗು ಅತ್ತು ಅಮ್ಮನನ್ನು ಕರೆಯೋದು? ಏನೋ ಮಹಾ ಹೊಸ ವಿಷಯ ಹೇಳುತಾನೆ ಎಂದಿದ್ದೆ....ಇಂಥಾ ಕವಿತ್ವ ಬರೆಯೋದಕ್ಕೆ ಏನು ಮುಟ್ಟಬೇಕು..... ಸರಿ ಸರಿ. ಇನ್ನೆಷ್ಟು ಪದ್ಯಗಳಿವೆಯೊ ಕಾಣೆ....ಪೂರ್ತಾ ಎರಡು ಪೇಜು.... ಊ್ಞ, ಇದೊಂದನ್ನು ಓದಿಯೇಬಿಡೋಣ. ಮಗು ಅತ್ತು ಸೊರಗಿತು—ಆಮೇಲೆ?"

ಅಳುವ ಕೇಳಿ ಬಂದ ತಾಯಿ
ಅಮೃತಸ್ಪರ್ಶಕಾರೆ ಗಾಯ,
ತೊಯ್ದ ಕಣ್ಣ ಬಿಚ್ಚಿ ಸುಳಿಸಿತೊಂದು ನಗೆಯನು,
'ನಿನ್ನನುಳಿದು ಬಾಳು ಶೂನ್ಯ' ಎನುವ ನಗೆಯನು.

"ಸ್ವಲ್ಪ ಸ್ವಾರಸ್ಯವಾಗಿರುವ ಹಾಗೆ ಕಾಣುತ್ತೆ" ಎಂದುಕೊಂಡು ವೆಂಕೋಬರಾಯರು ಮೊದಲನೆಯ ಪದ್ಯವನ್ನೂ ಎರಡನೆಯದನ್ನೂ ಸೇರಿಸಿ ತಿರುಗಿ ಓದಿ ತಲೆದೂಗಿದರು. ಈ ಎರಡು ಪದ್ಯಗಳಲ್ಲೂ ಹೇಳುವ ವಿಷಯ ಅವರ ಅನುಭವಕ್ಕೆ ಬಂದದ್ದು. ಒಂದು ದಿನ ಅವರ ಮಗು—ಆಗ ಅದಕ್ಕೆ

ಎರಡು ವರ್ಷ—ಚಂಡಿ ಹಿಡಿದುಬಿಟ್ಟಿತ್ತು. ಅವರಾಕೆ ಪಕ್ಕದ ಮನೆಗೆ ಹೋಗಿದ್ದರು. ವೆಂಕೋಬರಾಯರು ಮನೆಯಲ್ಲೊಬ್ಬರೇ. ಮಗುವನ್ನು ಕಂಡರೆ ಅವರಿಗೆ ಬಹಳ ಮೋಹ. ಅದಕ್ಕೆ ತನ್ನಲ್ಲಿ ತಾಯಿಗಿಂತ ಹೆಚ್ಚು ಪ್ರೀತಿ ಎಂದು ಅವರು ಭಾವಿಸಿದ್ದರು. ಅವರು ಕರೆದಾಗ ಒಮ್ಮೊಮ್ಮೆ ತಾಯಿಯ ಕೊಂಕುಳಿಂದ ಧುಮುಕಿ ಆ ಮಗು ಇವರ ಹೆಮ್ಮೆಯನ್ನು ಹೆಚ್ಚಿಸಿತ್ತು. ಆ ದಿನ ಮಗು ಅಳುವುದಕ್ಕೆ ಪ್ರಾರಂಭಿಸುತ್ತಲೂ ಸಮಾಧಾನ ಮಾಡುವುದಕ್ಕೆ ವೆಂಕೋಬರಾಯರು ಅದನ್ನು ಎತ್ತಿಕೊಂಡರು; ಅಳು ನಿಲ್ಲಲಿಲ್ಲ. 'ಹುಯ್ ಹುಯ್' ಎಂದು ಮೇಲಕ್ಕೂ ಕೆಳಕ್ಕೂ ಉಯ್ಯಾಲೆ ಆಡಿಸಿದರು. ಅದು ಮಗುವಿಗೆ ಬೇಡವಾಯಿತು. ತಿಂಡಿ ಕೊಟ್ಟರು, ಮುಂದೆ ಗೊಂಬೆ ಇಟ್ಟರು, ಇನ್ನೂ ಏನೇನೋ ಮಾಡಿದರು. ಇದು ಯಾವುದೂ ಆದಿನ ಮಗುವಿಗೆ ಬೇಡ. ಅದರ ಚಂಡಿ ನಿಲ್ಲಲಿಲ್ಲ. ಕೊನೆಗೆ ಗತ್ಯಂತರವಿಲ್ಲದೆ ತಮ್ಮ ಹೆಮ್ಮೆಯನ್ನು ನುಂಗಿಕೊಂಡು "ಲೇ" ಎಂದು ಗಟ್ಟಿಯಾಗಿ ಕೂಗಿಕೊಂಡರು. ಆಕೆಯ ಮೇಲೂ ಆ ಮಗುವಿನ ಮೇಲೂ ಆಗ ಅವರಿಗೆ ಬಲು ಸಿಟ್ಟು ಬಂದಿತ್ತು. ತಾಯಿ ಪಕ್ಕದ ಮನೆಯಿಂದ ಓಡಿಬಂದು ಮಗುವನ್ನು ಎತ್ತಿಕೊಂಡ ಕ್ಷಣ ಅದು ಅಳುವುದನ್ನು ನಿಲ್ಲಿಸಿ ನಗುವುದಕ್ಕೆ ಪ್ರಾರಂಭಿಸಿತು. 'ತೊಯ್ದು ಕಣ್ಣು ಬಿಚ್ಚಿ ಸುಳಿಸಿ'ದ ನಗೆಯದು. 'ನಿನ್ನನುಳಿಯೆ ಬಾಳು ಶೂನ್ಯ'ಎನ್ನುವ ನಗೆಯೂ ಹೌದು. ಆಗ ಅವರ ಹೆಮ್ಮೆ ತೀರ ಮುರಿಯಿತು. "ಮಗುವಿನ ಬಾಳಿಗೂ ತಾಯಿಯ ಬಾಳಿಗೂ ಯಾವುದೋ ಒಂದು ಅತಿ ನಿಕಟವಾದ ಸಂಬಂಧವಿದೆ; ಆ ಸಂಬಂಧ ಒಂದು ದೇವ ಮಾಯೆ" ಎಂಬ ಅರಿವು ಹುಟ್ಟಿತು. ಅವರ ಅಂದಿನ ಅನುಭವವೇ ಈ ಎರಡನೆಯ ಪದ್ಯದಲ್ಲಿ ವಿಕಾಸಗೊಂಡಿತ್ತು.

"ಹೌದು, 'ಅಮೃತಸ್ಪರ್ಶ.' ಮೊದಮೊದಲು ನಾನು ಮಗುವಿಗೆ ತಾಯಿಯ ಮೇಲೆ ಅಷ್ಟು ಮೋಹ ಇರುವುದು 'ಅಮೃತಕಲಶ' ದಿಂದ ಎಂದುಕೊಂಡಿದ್ದೆ. ಆದರೆ ನಮ್ಮ ಮಗುವಿಗೆ ಸ್ತನ್ಯ ಬಿಡಿಸಿ ಬಿಟ್ಟಿದ್ದರು. ಹೌದು, ತಾಯಿಯದು ಅಮೃತಸ್ಪರ್ಶ. ಅದೊಂದು ಸೃಷ್ಟಿಮಾಯೆ. ಆಗ ಮಗುವಿಗೆ ತಾಯಿಯೊಂದು ಪ್ರೇಮವಸ್ತು. ಅವಳಿಲ್ಲದೆ ಅದಕ್ಕೆ ಬಾಳು ಬೇಸರ—ನಿಶ್ಚಯ; ಸರಿ.... ಮುಂದಕ್ಕೆ...."

ಕೂಸು ಬೆಳೆದು ಆದ ರಾಮು ;
ಇಂದು ನೆರೆಯ ಮನೆಯ ಶಾಮು
ಆತನೊಂದೆ ಬಯಕೆ, ಕನಸು, ಬಾಳ ಧ್ಯೇಯವು ;
ಆಸೆಗಳಿಗೆ ಕಲ್ಪತರುವು, ಬೇನೆಗಮೃತವು.

ಒಂದೆ ಜೀವದೆರಡು ಕವಲು
ಶಾಮು—ರಾಮು ; ಹಾಡು ಹೊಳಲು ;
ತುಂಬುಗಣ್ಣೊಳವನ ರಾಮು ಸೆರೆಯ ಕೊಳುವನು.
" ಬಂದೆ ಶಾಮು, ಬಾಳ ಟೊಳ್ಳು ತುಂಬಿತೆ "ನುವನು.

ಇದೂ ಅವರ ಅನುಭವದ ವಿಷಯವೇ. ಅವರ ಬಾಲ್ಯಕ್ಕೆ ಸಂಬಂಧ ಪಟ್ಟದ್ದು. ಆಗ ಅವರ ಬಾಳು ತಾಯನ್ನು ಬಿಟ್ಟು ಗೆಳೆಯರನ್ನು ನೆಮ್ಮಿತ್ತು. ಅವರೊಡನೆ ಬೆರೆದು ಇದ್ದರೆ ಅವರಿಗೆ ಸುಖ, ಇಲ್ಲದಿದ್ದರೆ ಇಲ್ಲ. ತಿಂಡಿ ತೀರ್ಥಗಳಿಗೆ ಮಾತ್ರ ಮನೆ ಬೇಕು. ಅವುಗಳನ್ನು ತಾಯಿ ಕೊಟ್ಟೇ ಕೊಡು ತ್ತಾಳೆ. ಹಾಗೆ ಅವಳ ಶುಶ್ರೂಷೆಯನ್ನು ತೆಗೆದುಕೊಳ್ಳುವುದು ಮಗನ ಹಕ್ಕು. ಆದರೆ ಸ್ನೇಹಿತರು—ಬಾಲ್ಯ ಸ್ನೇಹಿತರು? ಅವರ ಮೇಲೆ ತನ್ನ ಹಕ್ಕೇನೂ ಇಲ್ಲ. ಅವರ ಹಂಗು ಮಾತ್ರ ತನಗುಂಟು. ಆ ಗೆಳೆಯರು ತನ್ನ ಆಸೆಗಳ ನಿರ್ವಾಪಕರು. ಬಯಕೆಗಳನ್ನು ಬೆಳಸಿ ಕೈಗೂಡಿಸುವವರೂ ಅವರೇ.

ವೆಂಕೋಬರಾಯರಿಗೆ ಈ ಪದ್ಯಗಳನ್ನು ಓದಿ ಅವರ ಜೀವದ ಗೆಳೆಯ ರಾದ ಗೋವಿಂದರಾಯರ ನೆನಪು ಬಂತು. ಆ ನೆನಪಿನೊಡನೆ ಬೆರೆದು ಇನ್ನೆ ರಡು ಅನುಭವಗಳು. ಎರಡೂ ಬಹಳ ತಮಾಷೆಯವು. ತಾವಿಬ್ಬರೂ ಗುಡಿಯ ಭಟ್ಟನಿಗೆ ಸಂಗೀತವನ್ನು ಕಲಿಸಿದ ವಿಷಯವದು. ನೂರಾರು ನೆನಪುಗಳಲ್ಲಿ ಈ ತಮಾಷೆಯೇ ಏಕೆ ಬರಬೇಕು? ಆಗ ಅದು ವೆಂಕೋಬರಾಯರಿಗೇ ತಿಳಿ ಯದು. ಮನಸ್ಸಿನ ವಿಚಿತ್ರ ವ್ಯಾಪಾರಗಳಲ್ಲಿ ಇದೂ ಒಂದು.

ಗೋವಿಂದರಾಯರೂ ವೆಂಕೋಬರಾಯರೂ ಒಂದೇ ಊರಿನವರು. ತಪ್ಪು ಹೆಜ್ಜೆಯನ್ನಿಟ್ಟು ನಡೆಯುವ ಕಾಲದಿಂದ ಇವರಿಬ್ಬರೂ ಗೆಳೆಯರು. ಒಂದೇ ಜೀವದ ಎರಡು ಕವಲಿನಂತೆ ಬೆಳೆದು ಬಂದ ಗೆಳೆಯರು. ಒಬ್ಬರು 'ಹಾಡು' ಇನ್ನೊಬ್ಬರು 'ಹೊಳಲು'; ಇವರಿಬ್ಬರೂ ಜೊತೆಗೂಡಿದ್ದರೆ ಸುಖ —ಇಲ್ಲದಿದ್ದರೆ ಲೋಕವೆಲ್ಲಾ ಶೂನ್ಯ. ಒಬ್ಬರ ಜೀವವನ್ನು ಇನ್ನೊಬ್ಬರ ಜೀವ

ಹಾಗೆ ಅವಲಂಬಿಸಿತ್ತು. ಒಂದು ಸಲ ಅವರ ಊರಿಗೆ ಪ್ಲೇಗು ಬಂದಿತ್ತು. ಆಗ ಇವರಿಬ್ಬರಿಗೂ ಹದಿನಾರು ವಯಸ್ಸು. ತಮ್ಮೂರನ್ನು ಬಿಟ್ಟು ಹತ್ತಿರದ ಒಂದು ಹಳ್ಳಿಗೆ ಇವರಿಬ್ಬರ ಮನೆಯವರೂ ವಾಸಕ್ಕೆ ಬಂದಿದ್ದರು. ಆ ಹಳ್ಳಿಯಲ್ಲಿ ಒಂದು ಗುಡಿ—ಪುರಾತನವಾದದ್ದು. ಆ ಗುಡಿಗೆ ಒಬ್ಬರು ಭಟ್ಟರು. ಆ ಭಟ್ಟರಿಗೆ ಸಂಗೀತದಲ್ಲಿ ಆಸೆ. ಹಳ್ಳಿಯ ಭಜನೆಯ ಕೂಟವನ್ನು ನಡೆಸುವವರು ಅವರೇ. ತನ್ನದು ಅಪಸ್ವರವೆಂದು ಭಟ್ಟರಿಗೆ ತಿಳಿಯದು. ಹಳ್ಳಿಯವರಿಗೂ ಗೊತ್ತಿಲ್ಲ. ವೆಂಕೋಬರಾಯರೂ ಗೋವಿಂದರಾಯರೂ ಒಂದು ಶನಿವಾರ ಭಜನೆಯ ಕೂಟಕ್ಕೆ ಹೋಗಿ ಭಟ್ಟರು ಕಿರಿಚುವುದನ್ನು ಕೇಳಿ, "ದೇವಸ್ಥಾನದ ಮೇಲ್ಬಾವಣಿ ಬಲು ಗಟ್ಟಿ" ಎಂಬುದಾಗಿ ಪ್ರಶಂಸಿಸಿದ್ದರು. ಆ ಭಜನೆಯ ಕೂಟದಲ್ಲಿ ಗೋವಿಂದರಾಯರೂ ಹಾಡಬೇಕಾಗಿ ಬಂತು. ಇವರ ಹಾಡುಗಾರಿಕೆ ಭಟ್ಟರ ಮನಸ್ಸಿಗೆ ಹಿತವಾದಂತೆ ತೋರುತ್ತದೆ. ಅಂದಿನಿಂದ ಇವರನ್ನು ಸಂಗೀತ ವಿದ್ವಾಂಸರೆಂದು ಭಾವಿಸಿ ಇವರ ಶುಶ್ರೂಷೆಯಲ್ಲಿ ಭಟ್ಟರು ನಿರತರಾದರು.

ಭಟ್ಟರದು ಕುಶಾಗ್ರಬುದ್ಧಿಯಲ್ಲ. ಅವರಿಗೆ ಸಂಸ್ಕೃತ ಬಾರದು. ಗೋವಿಂದರಾಯರ ಹಾಸ್ಯವನ್ನು ತಿಳಿದುಕೊಳ್ಳುವ ಮಟ್ಟಿಗೆ ಅವರಿಗೆ ಚೈತನ್ಯವಿಲ್ಲ. ಈ ಸುಳುವನ್ನು ಗೆಳೆಯರಿಬ್ಬರೂ ತಿಳಿದುಕೊಂಡರು. ಮಾರನೆಯ ದಿನದಿಂದ ಭಟ್ಟರ ಮನೆಯಲ್ಲಿ ಸಂಗೀತ ಪಾಠಕ್ಕೆ ಪ್ರಾರಂಭವಾಯಿತು. ಪಾಠಕ್ಕೆ ಮೊದಲು ಗೋವಿಂದರಾಯರು ಅವತರಣಿಕೆಯನ್ನು ಈ ರೀತಿ ಹಾಕಿದರು:

"ನೋಡಿ ಭಟ್ಟರೆ, ಸಂಗೀತದಲ್ಲಿ ಗೌಡ, ವಂಗ, ಗುಜರಾಥಿ, ಹಿಂದುಸ್ತಾನಿ, ಕರ್ಣಾಟಕ ಎಂದು ಐದು ಜಾತಿಗಳಿವೆ. ನಿಮ್ಮ ಭಾನೆ ನೋಡಿದರೆ ನಿಮಗೆ ಕರ್ಣಾಟಕ ಸಂಗೀತ ಚೆನ್ನಾಗಿ ಬರುತ್ತೆ ಎಂದು ಕಾಣುತ್ತೆ. ಅದರಲ್ಲೂ ಕರ್ಣಾಟಕದಲ್ಲಿ ದೊಣ್ಣೆ ಬಿಡಾಲರಾಯರ ಭಾನೆ ಕಲಿತುಕೊಳ್ಳಬೇಕಾದದ್ದೇ" ಎಂದರು.

ಭಟ್ಟರು ಆಶ್ಚರ್ಯದಿಂದ, "ದೊಣ್ಣೆ ಬಿಡಾಲರಾಯರೆ? ಅವರಾರಪ್ಪ ಅವರು, ಹೆಸರು ಕೂಡಾ ಕೇಳಿಲ್ಲವೆ ನಾನು!" ಎಂದರು.

ಗೋವಿಂದರಾಯರು:—"ಆಶ್ಚರ್ಯ, ಆಶ್ಚರ್ಯ! ತಾವು ಅವರ ಹೆಸರನ್ನು

ಕೂಡ ಕೇಳಿಲ್ಲವೆ? ಮಹಾ ಪ್ರಸಿದ್ಧರು. ಅವರ ಸಂಗೀತ ಅಂದರೆ ಅದ್ಭುತ ವಾದದ್ದು. ಕರ್ಣಾಟಕವಾಗಿದ್ದರೂ ಅವರ ಭಾನೆ ಹೊಸ ತರಹದ್ದು. ರಾಗ ವಿಸ್ತಾರದಲ್ಲಂತೂ ಅಸದೃಶರು. ಅರ್ಧರಾತ್ರಿಯ ನಿಶ್ಶಬ್ದದಲ್ಲಿ ಅವರ ಹಾಡು ಗಾರಿಕೆಯನ್ನು ಕೇಳುತ್ತಾ ಇದ್ದರೆ ಪ್ರಾಣ ಹಾರಿಹೋದಂತಾಗುತ್ತೆ. ಈ ಸಮಾಚಾರ ಕೇಳಿ; ಮೈಸೂರಿನಲ್ಲಿ ವೆಂಕಟೇ ಅರಸಿನವರು ಎಂಬ ಒಬ್ಬ ದೊಡ್ಡ ಅರಸಿನವರಿದ್ದರು—ನಿಮಗೆ ಗೊತ್ತಿರಬಹುದು. ಅವರಿಗೆ ಸಂಗೀತ ಅಂದರೆ ಪ್ರಾಣ. ಅವರ ಕಾಂಪೌಂಡಿನಲ್ಲೆ ಒಂದು ಸಲ ಈ ಬಿಡಾಲರಾಯರು ಬಿಡಾರ ಮಾಡಿದ್ದರು. ಅರ್ಧರಾತ್ರೆ. ಆ ವೇಳೆಯಲ್ಲೆ ತಮ್ಮ ಖಾಸಾ ಶಿಷ್ಯಸಿಗೆ ಅವರು ಪಾಠ ಹೇಳಿಕೊಡುವ ಪದ್ಧತಿ. ಆ ದಿನ ಬಿಡಾಲರಾಯರಿಗೆ ಬಹಳ ಖುಷಿಯಾಗಿಬಿಟ್ಟಿದೆ. ಪಾಠ ಹೇಳಿಕೊಡುತ್ತಾ ಇರುವಾಗ ಶಿಷ್ಯನನ್ನು ಮರೆತು ತಾವೇ ಹಾಡುವುದಕ್ಕೆ ಪ್ರಾರಂಭಿಸಿಬಿಟ್ಟರು. ಏನು, ಸಂಗೀತ ತಾರಕ್ಕೇರಿಬಿಟ್ಟಿದೆ. ಬಂಗಲೆಯಲ್ಲಿ ಮಲಗಿದ್ದ ವೆಂಕಟೇ ಅರಸಿನವರಿಗೆ ಎಚ್ಚರವಾಯಿತು. ಕೇಳಿದರು; ಬಿಡಾಲರಾಯರು ಮೈಮೇಲೆ ಸ್ಮೃತಿಯಿಲ್ಲದೆ ಹಾಡುತ್ತಿದ್ದಾರೆ. ವೆಂಕಟೇ ಅರಸಿನವರು ಅಂಥ ಮರ್ಮಸ್ಪರ್ಶಿಯಾದ ಸಂಗೀತವನ್ನು ಹಿಂದೆ ಎಂದೂ ಕೇಳಿರಲಿಲ್ಲ. ಅವರಿಗೆ ರೋಮಾಂಚ ವಾಯಿತು. ಬಿಡಾಲರಾಯರಿಗೆ ಆ ಕ್ಷಣ ಏನನ್ನಾದರೂ ಬಹುಮಾನ ಮಾಡಿ ತಮ್ಮ ಸಂತೋಷವನ್ನು ಸೂಚಿಸಬೇಕೆಂದು ಅಭಿಲಾಷೆ ಹುಟ್ಟಿತು. ಆಗ ಅವರ ಕೈಯಲ್ಲೇನೂ ಇರಲಿಲ್ಲ; ಆದರೆ ಮಗ್ಗುಲಲ್ಲಿ ಒಂದು ರತ್ನಖಚಿತ ವಾದ ಚಿನ್ನದ ಹಿಡಿ ಹಾಕಿದ್ದ ದೊಣ್ಣೆಯೊಂದು ಇತ್ತು—ಸುಮಾರು ಸಾವಿರ ರೂಪಾಯಿ ಬೆಲೆಯದು. ಅದನ್ನು ಯಾವಾಗಲೂ ಅವರು ಅಗಲುತ್ತಿರಲಿಲ್ಲ. ಆ ದೊಣ್ಣೆಯನ್ನು ತೆಗೆದುಕೊಂಡು ಇದ್ದ ವೇಷದಲ್ಲೆ ಹೊರಗೆ ಹೊರಟು ಬಂದು, ಬಿಡಾಲರಾಯರಿಗೆ ಬಹುಮಾನ ಮಾಡಿದರು. ಅಂದಿನಿಂದ ಬಿಡಾಲ ರಾಯರಿಗೆ ದೊಣ್ಣೆ ಬಿಡಾಲರಾಯರೆಂದೇ ಪ್ರಸಿದ್ಧಿ. ಅವರ ಭಾನೆಯ ಸ್ವಾರಸ್ಯವನ್ನು ನಾನೇನು ಹೇಳಲಿ! ನನಗೆ ಅಭ್ಯಾಸ ಮಾಡುವುದಕ್ಕೆ ಒಂದು ವರ್ಷ ಹಿಡಿಯಿತು. ಬಹು ಕಷ್ಟ, ಬಹು ಕಷ್ಟ."

ಈ ದೊಣ್ಣೆ ಬಿಡಾಲರಾಯರ ಕತೆಯನ್ನು ನಗದೆ ಹಾವಭಾವ ವಿಲಾಸ ಗಳೊಂದಿಗೆ ಗೋವಿಂದರಾಯರು ಹೇಳುತ್ತಿದ್ದಾಗ ವೆಂಕೋಬರಾಯರಿಗೆ

ತಡೆಯಲಾರದ ನಗು. ಎರಡು ಬೆಕ್ಕುಗಳು ಅರ್ಧರಾತ್ರಿಯಲ್ಲಿ ಕಾದುತ್ತಿರು ವಾಗ ತಾವು ಲಂಗೋಟಿ ಕಟ್ಟಿಕೊಂಡಿರುವ ಹಾಗೆಯೇ ಎದ್ದು ಹೊರಕ್ಕೆ ಬಂದು, ದೊಣ್ಣೆಯಿಂದ ಪ್ರಹರಿಸಿದ ವೈಭವವೆ ಗೋವಿಂದರಾಯರು ಹೇಳಿದ ಬಿಡಾಲರಾಯರ ಕತೆಯಾಗಿತ್ತು. "ಭಲಾ, ಗೋವಿ" ಎಂದುಕೊಂಡರು.

ಗೋವಿಂದರಾಯರಿಗೆ ಇಂಥ ಬಿಡಾಲರಾಯರ ಭಾನೆ ಬರುತ್ತದೆ ಎಂದು ಕೇಳಿ ಭಟ್ಟರಿಗೆ ಕುತೂಹಲ ಹೆಚ್ಚಾಯಿತು.

"ಅದೆಲ್ಲಿ ಅಂದರೆ—ಸ್ವಲ್ಪ ಅನ್ನಿ ಅಂದರೆ—ಕೇಳೋಣ" ಎಂದು ಗೋಗರೆಯುವುದಕ್ಕೆ ಪ್ರಾರಂಭಿಸಿದರು. ಅರ್ಧಗಂಟೆ ಗೋಗರೆದ ಮೇಲೆ ಗೋವಿಂದರಾಯರು ಕೆಮ್ಮಿ ಗಂಟಲು ಸರಿಮಾಡಿಕೊಂಡು ಪ್ರಾರಂಭಿಸಿದರು ಬಿಡಾಲರಾಯರ ಸಂಗೀತವನ್ನು.

"ಕೇಳಿ ಭಟ್ಟರೆ, ಅವರ ಸಂಗೀತ ಅಂದರೆ ತಾಳ ಗೀಳ ಕಟ್ಟಿಟ್ಟುಬಿಡ ಬೇಕು. ಅಯ್, ಕೈ ಎತ್ತುವುದೆಂದರೇನು ?"

"ಮಿಯ ......ಮಿಯಾವ್........ಮಿಾ........ಯಾ........ವ್........ ಗುರ್........ಗುರ್........ಗುರ್."

ಗೂಂ............ಗೂಂ............ಗೂಂ........ಗುರ್. ಮಿಯ........ ಮಿಯಾವ್....ಮಿಾ....ಯಾ....ವ್....ಗುರ್....ಗೂರ್. ಗೂರ್...."

ಕಣ್ಣುಗಳನ್ನು ಅರ್ಧ ಮುಚ್ಚಿ ಬಹಳ ಕಷ್ಟದಿಂದ ಹಾಡುವವರಂತೆ ಅಭಿನಯಿಸುತ್ತಾ, ಕೈಬೆರಳುಗಳನ್ನು ಬಗ್ಗಿಸಿ, ಭಟ್ಟರ ಮುಖವನ್ನು ಪರಚು ವಂತೆ ತಾಳವನ್ನು ಎಣಿಸಿ ಹಾಕುತ್ತಾ, ಹಾಡುವ ಭರದಲ್ಲಿ ಕುಕ್ಕುರಗಾಲಿನಲ್ಲಿ ಕುಳಿತು ಹಿಂದಕ್ಕೂ ಮುಂದಕ್ಕೂ ಕುಪ್ಪಳಿಸುತ್ತಾ, ವಿಚಿತ್ರವಾಗಿ ಗೋವಿಂದ ರಾಯರು ಅಭಿನಯಿಸಿ ಬಿಡಾಲರಾಯರ ಸಂಗೀತವನ್ನು ಮೂರ್ತೀಕರಿಸಿ ದರು.

ವೆಂಕೋಬರಾಯರಿಗೆ ತಡೆಯಲಾರದ ನಗು ಬಂತು. ಆದರೆ ಗೋವಿಂದರಾಯರ ಭ್ರೂಭಂಗಿ ಅದನ್ನು ಬಿಗಿಹಿಡಿದಿತ್ತು. ಹೀಗೆ ಕಾಲು ಗಂಟೆ ಹಾಡಿದ ಮೇಲೆ ಬಹು ಶ್ರಾಂತರಾದವರಂತೆ ಗೋವಿಂದರಾಯರು ನಿಟ್ಟುಸಿರುಬಿಟ್ಟು ಕುಳಿತರು. ಭಟ್ಟರಿಗೆ ಅರ್ಧಲೋಟ ಹಾಲು ಖರ್ಚಿಗೆ ಬಂತು.

ಅಂದಿನಿಂದ ಭಟ್ಟರಿಗೆ ಬಿಡಾಲರಾಯರ ಸಂಗೀತವನ್ನು ಕಲಿತುಕೊಳ್ಳ ಬೇಕೆಂದು ಆಸೆ. ಗೋವಿಂದರಾಯರಿಗೂ ವೆಂಕೋಬರಾಯರಿಗೂ ಕಾಲ ಕಳೆಯುವುದಕ್ಕೆ ಇದೊಂದು ವಿನೋದ ಸಿಕ್ಕಿತು. ಎಷ್ಟು ಹೇಳಿ ಕೊಟ್ಟರೂ ಭಟ್ಟರಿಗೆ ಬಿಡಾಲರಾಯರ ಭಾನೆ ಬಾರದು. "ನಿಮ್ಮ ಶಾರೀರದಲ್ಲಿ ಪಲುಕಿಲ್ಲ. ಆ ಪಲುಕು ಬಂದ ಹೊರತು ನಿಮಗೆ ಬಿಡಾಲರಾಯರ ಭಾನೆ ಬರುವುದಿಲ್ಲ. ಪಲುಕನ್ನು ಅಭ್ಯಾಸ ಬಲದಿಂದ ಸಂಪಾದಿಸಿಕೊಳ್ಳಬೇಕು. ಅದಕ್ಕೊಂದು ಉಪಾಯ ಹೇಳಿಕೊಡುತ್ತೇನೆ. ಹಾಗೆ ಮಾಡಿ, ಪಲುಕು ಬರುತ್ತೆ" ಎಂದರು ಗೋವಿಂದರಾಯರು. ಶಾರೀರದಲ್ಲಿ ಪಲುಕು ಹುಟ್ಟುವುದಕ್ಕೆ ಏನು ಮಾಡುವುದಕ್ಕೂ ಸಿದ್ಧರಾಗಿದ್ದ ಭಟ್ಟರು ಕುತೂಹಲದಿಂದ "ಏನು? ಏನುಪಾಯ?" ಎಂದರು. "ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದು ಕತ್ತಿನವರೆಗೂ ತಣ್ಣೀರಿನಲ್ಲಿ ಮುಳುಗಿ ಅಕಾರ ಉಕಾರ ಸಾಧನೆಮಾಡಿದರೆ ನಿಮಗೆ ಪಲುಕು ಬರುತ್ತೆ. ನಾಳೆಯಿಂದ ನೀವು ಹಾಗೆ ಮಾಡಿ. ನಾವು ಬಂದು ಸರಳೆ ಹೇಳಿಕೊಡುತ್ತೇವೆ" ಎಂದು ಗೋವಿಂದರಾಯರು ಹೇಳಿದರು. ಸರಿ, ಮಾರನೆಯ ದಿನದಿಂದ ಭಟ್ಟರು ಬೆಳಿಗ್ಗೆ ನಾಲ್ಕು ಗಂಟೆಗೆ ಏಳುವುದು, ಈ ಗುರುಗಳಿಬ್ಬರನ್ನೂ ಎಬ್ಬಿಸುವುದು, ಕೊಳಕ್ಕೆ ಹೋಗಿ ಕತ್ತಿನವರೆಗೂ ಆ ಕೊರೆಯುವ ನೀರಿನಲ್ಲಿ ಮುಳುಗಿ ಇವರು ಹೇಳಿಕೊಡುವ ಸರಳೆಯನ್ನು ಕಿರಿಚುವುದು, ಈ ದಿನಚರಿ ಪ್ರಾರಂಭವಾಯಿತು. ಆಗ ಮಾಗಿಯ ಕಾಲ, ಚಳಿ ಹೇಳಿತೀರದು. ಆ ಕೊಳದಲ್ಲಿ ನೀರೂ ಹೆಚ್ಚಾಗಿರಲಿಲ್ಲ. ನೀರಿನಲ್ಲಿ ಮುಳುಗಿದ್ದ ಭಟ್ಟರು 'ಸಾ' ಎನ್ನುವಾಗ ಅವರ ಕಂಠ 'ಸ–ಅ–ಅ–ಅ–ಅ' ಎಂದು ನಡುಗುವುದು. ಗುರುಗಳು ಇಬ್ಬರೂ ಹತ್ತಿರದ ಮಂಟಪದಲ್ಲಿ ಬೆಚ್ಚನೆ ಕಂಬಳಿ ಹೊದೆದುಕೊಂಡು ಸರಳೆ ಹೇಳಿಕೊಡುತ್ತಾ, "ನೋಡಿದಿರೋ, ಈಗ ಹೇಗೆ ಪಲುಕು ಬರುತ್ತೆ ನಿಮ್ಮ ಕಂಠದಲ್ಲಿ! ಹೀಗೆ ನೀವು ಒಂದು ತಿಂಗಳು ಅಭ್ಯಾಸ ಮಾಡಿ, ಆಮೇಲೆ ನೋಡಿ ನಿಮ್ಮ ಶಾರೀರವನ್ನ" ಎನ್ನುತ್ತಿದ್ದರು. ಹೀಗೆ ಎಷ್ಟೋ ಮುಂಜಾನೆಗಳು ಸಾಗಿದ್ದವು. ಕೊನೆಗೆ ಒಂದು ದಿನ ಭಟ್ಟರಿಗೆ ಚಳಿ ಜ್ವರ ಬಂದು ಸಾಧನೆಗೆ ಸ್ವಲ್ಪ ವಿಚ್ಛಿತ್ತಿ ಬಂದಿತ್ತು.

ಭಟ್ಟರು ಹೀಗೆ ಆ ಕೊರೆಯುವ ನೀರಿನಲ್ಲಿ ನಿಂತು ಸರಳೆ ಎಳೆಯುವ ಚಿತ್ರವೂ, ಬಿಡಾಲರಾಯರ ಸಂಗೀತವೂ, ಗೋವಿಂದರಾಯರ ನೆನಪಿನೊಡನೆ

ಜಿರೆದು ಬಂದು ವೆಂಕೋಬರಾಯರಿಗೆ ನಗೆಯನ್ನು ತಂದಿದ್ದವು. ಈಗ ಆ ಜೀವದ ಗೆಳೆಯ ಗೋವಿಂದರಾಯರು ಇಲ್ಲ. ತೀರಿಹೋಗಿ ಐದಾರು ವರುಷಗಳಾಗಿದ್ದವು. ಹಿಂದೆ, ಆಗಿನ ಕಾಲದಲ್ಲಿ, ಅವರು ತೀರಿಹೋಗಿದ್ದರೆ ವೆಂಕೋಬರಾಯರ ಬಾಳಿನಲ್ಲಿ ಎಷ್ಟು ಭಯಂಕರ, ಎಷ್ಟು ಗಭೀರ, ದುಃಖಕರವಾದ ಅರಕೆ ಮೂಡುತ್ತಿತ್ತು; ಆದರೆ ಈಗ ಆ ಮಿತ್ರನ ನಷ್ಟ ಒಂದು ಸುಯ್ಯಲನ್ನು ತಂದೀತು, ಒಂದು ನೆನವಿನ ಎಳನಗೆಯನ್ನು ಹರಡೀತು, ಅಷ್ಟೆ. ವೆಂಕೋಬರಾಯರ ಮೋಹ ಸ್ನೇಹಿತನನ್ನು ಬಿಟ್ಟು ಇನ್ನಾವುದನ್ನೋ ಅವಲಂಬಿಸಿತ್ತು.

ಈಗ ವೆಂಕೋಬರಾಯರಿಗೆ ಪದ್ಯದಲ್ಲಿ ಆಸಕ್ತಿ ಹೆಚ್ಚಾಯಿತು.

"ಒಂದು ಕಾಲದಲ್ಲಿ ನಾನೂ 'ಬಂದೆ ಗೋವಿ, ಬಾಳ ಟೊಳ್ಳು ತುಂಬಿತು' ಎನ್ನುತ್ತಿದ್ದೆ—ಆದರೆ, ಈಗ........ಈಗ? ಮುಂದಕ್ಕೆ ಈ ಕವಿ 'ಬಾಳಿನ ಹಂಬಲ' ಮೇಲೆ ಏನು ಹೇಳುತ್ತಾನೋ ನೋಡೋಣ."

ರಾಮುನಿಂದು ರಾಮುರಾಯ ;
ಎಂಥ ಚೆಡಗು, ಏನು ಪ್ರಾಯ !
ನಿತ್ಯ ಕನಸುಕಾಂಬ ತೆರದಿ ನೋಟದಲೆತವು !
ಒಲುಮೆನೆರೆಗೆ ಸಿಲುಕಿದವನ ಮನದ ಸೆಳೆತವು !

ಅಕ್ಷರಶಃ ನಿಜವಾದ ಮಾತು. ವೆಂಕೋಬರಾಯರು ಹರೆಯಕ್ಕೆ ಬೆಳೆದು ಕನ್ನಡಿಯಲ್ಲಿ ಮುಖವನ್ನು ನೋಡಿ, ಹಿಗ್ಗಿ ಹಿಗ್ಗಿ ಕೆಂಪಾದ ದಿನಗಳ ಅನುಭವವದು. ಆಗ ಅವರ ಬಾಳಿಗೆ ಒಂದು ಹೊಸ ಬೆಳಕು ನುಸಿದಿತ್ತು. ಆಗ ಅವರೊಬ್ಬರು ಹುಚ್ಚರು. ಅವರ ಆಸೆಗಳೆಲ್ಲಾ ಒಂದು ಹೆಣ್ಣಿನಲ್ಲಿ ಮೂರ್ತೀಕರಿಸಿದ್ದವು. ಆ ಹೆಣ್ಣು ಅವರ ಬಾಳಿನ ಗುರಿ. ಜೀವಿತದ ವಿಷಯವೂ ಅದೊಂದೇ ; ಬದುಕಿನ ನಚ್ಚೂ ಅದೇ ; ಅವರ ಕಣ್ಮನಗಳ ಸಾರ್ಥಕ್ಯ ಆ ಹೆಣ್ಣಿನಿಂದ. ಅವರ ಪ್ರಪಂಚವೆಲ್ಲಾ ಆ ಹೆಣ್ಣೊಂದರಲ್ಲಿಯೇ ಅಡಗಿತ್ತು. ಅವಳಿದ್ದೆಡೆ ಬೆಳಕು, ಅವಳಿಲ್ಲದೆಡೆಯಲ್ಲಿ ಎಲ್ಲವೂ ಶೂನ್ಯ—ಶೂನ್ಯ.

ನಿಶ್ಚಯ :

ಇಂದು ಸರಳೆ ಅವನ ಜಗವ
ತುಂಬಿ ಬಾಳ ಸೂರೆಗೊಳುವ-
ಳಾತ್ಮವನ್ನೆ ಮಾಸಲಿಟ್ಟು ರಾಮು ಒಲಿವನು
"ಸುಳಿವೆ, ಸರಳ, ಬಾಳ ಗುಟ್ಟು ಬಿರಿಯಿತೆ" ನುವನು.

ಆಮೇಲೆ, ಆ ಹೆಣ್ಣನ್ನು ವೆಂಕೋಬರಾಯರು ಮದುವೆಯಾಗಿ ಏಕಾಂತದಲ್ಲಿ ಆಕೆಯೊಡನಿರುವಾಗ, ಪ್ರಣಯದ ಹುಚ್ಚಿನಲ್ಲಿ, "ಕಮಲು, ಈಗ ಬಾಳು ಅರ್ಥವಾಯಿತು. ನಿನಗೇ, ಕಮಲು, ನಿನಗೇ–ನೀನು ಸಿಕ್ಕುತ್ತೀ ಎಂದೇ ನಾನು ಹುಟ್ಟಿ ಬೆಳೆದು ಜೀವವನ್ನು ಇಂದಿನವರೆಗೂ ನೀಸಿದ್ದು. ಇಂದಿನವರೆಗೂ ನಿನ್ನನ್ನು ಬಾಳು ಹುಡುಕುತ್ತಿತ್ತು," ಎಂದು ಅವರು ತಮ್ಮ ಭಾರ್ಯೆಯನ್ನು ನೋಡಿ ಹೇಳಿದ್ದ ಜ್ಞಾಪಕ. "ಎಲಾ, ಇದೆಲ್ಲಾ ಇವನಿಗೆ ಹೇಗೆ ಗೊತ್ತಾಯಿತು?" ವೆಂಕೋಬರಾಯರಿಗೆ ಆಶ್ಚರ್ಯವಾಯಿತು. ಕುತೂಹಲದಿಂದ ಮುಂದಕ್ಕೆ ಓದಲು ಪ್ರಾರಂಭಿಸಿದರು.

ಸರಳೆ ರಾಮರೊಲುಮೆಸೂತ್ರ
ಹಸುಳೆ ಪುಟ್ಟು; ಮೊದಲು ಚಿತ್ರ!—
ರಾಮುಗದರ ಬಾಳ ಗುಟ್ಟು ಅರ್ಥವಾಗದು:
"ನಮ್ಮ ಪ್ರೇಮಕಡ್ಡಬಂದ ಗಂಡವೇನಿದು?"

ಹೌದು, ಅವರಾಕೆಯ ಪ್ರಥಮಗರ್ಭದಲ್ಲಿ ಅವರಿಗೂ ಹಾಗೆಯೇ ಎನ್ನಿಸಿತ್ತು. "ಇದಕ್ಕೇನವಸರವಾಗಿತ್ತು? ಈ ಮಗು ಸ್ವಲ್ಪ ದಿನ ತಡೆದು ಬರಬಹುದಾಗಿತ್ತು. ಇದೇನು ಗಂಡಾಂತರ?" ಎಂದುಕೊಂಡಿದ್ದರು. ಆ ಮೇಲೆ ಆ ಮಗು ಹುಟ್ಟಿ ಆರು ತಿಂಗಳಾಗುವವರೆಗೂ ಅದನ್ನು ಕಂಡರೆ ಇವರಿಗೆ ತಿರಸ್ಕಾರ, ದ್ವೇಷ. ಆದರೆ ಆ ದ್ವೇಷ ಚಿರಕಾಲ ನಿಲ್ಲಲಿಲ್ಲ. ಯಾವುದೋ ಒಂದು ಸನ್ನಿವೇಶದಲ್ಲಿ ಇದ್ದಕ್ಕಿದ್ದ ಹಾಗೆ ಅತಿಶಯವಾಗಿ ಪ್ರೇಮ ಹುಟ್ಟಿ ಆ ದ್ವೇಷವನ್ನು ಕೊಚ್ಚಿಕೊಂಡುಹೋಗಿತ್ತು. ಒಂದು ದಿನ ಅವರಾಕೆ ಮಗುವನ್ನು ಇವರ ಮಗ್ಗುಲಲ್ಲಿ ಮಲಗಿಸಿ ಕಾಫಿ ಕಾಸುವುದಕ್ಕೆ ಒಳಕ್ಕೆ ಹೋಗಿದ್ದರು. ಅಂದೇ ವೆಂಕೋಬರಾಯರು ಮಗುವನ್ನು ಚೆನ್ನಾಗಿ ನೋಡಿದ್ದು. ಕಿಟಕಿಯಿಂದ ಸೂರ್ಯನ ಬೆಳಕು ಸುಣ್ಣ ತೊಡೆದು ಬೆಳ್ಳಗಿದ್ದ ಗೋಡೆಯ ಮೇಲೆ ಬಿದ್ದು, ಪ್ರತಿಫಲಿಸಿ, ಕೊಠಡಿಯನ್ನು ಉಜ್ವಲವಾಗಿ ಬೆಳಗಿತ್ತು. ಆ ಬೆಳಕಿನಲ್ಲಿ ಮಗು ಬಹಳ ಸುಂದರವಾಗಿ ಕಂಡಿತು. ಮುದ್ದಾದ ಮುಖ; ತುಂಬಿದ ಹಾಲುಕೆನ್ನೆ; ನೀರಾಡುವ, ಅಗಲವಾದ, ನೀಲಜಲದಲ್ಲಿ ಅರಳಿರುವ ಪುಷ್ಪದಂತೆ, ಕಣ್ಣುಗಳು; ಮುಖದಲ್ಲಿ ಮಂದಹಾಸ. ಕಂದನ ಕಣ್ಣುಗಳು ಇವರನ್ನು ನೋಡಿ ನಗುತ್ತಿದ್ದುವು. ಆಗ ಒಲುಮೆ ಹುಟ್ಟಿತು.

ಆ ಒಲುಮೆ ಅವರ ಬಾಳಿಗೆ ಒಂದು ಹೊಸ ದೃಷ್ಟಿಯನ್ನು ಕೊಟ್ಟಿತು. ತಾನೇ ಅದು—ತಮ್ಮ ಜೀವವೇ ಹೆಚ್ಚು ಪೂರ್ಣವಾಗಿ ಹೆಚ್ಚು ಸಂಪುಷ್ಟವಾಗಿ ಇದರಲ್ಲಿ ವಿಕಾಸಗೊಂಡಿದೆ; ಅಲ್ಲದೆ ತಮ್ಮಿಬ್ಬರ ಒಲುಮೆ ಸೂತ್ರವಿದು—ಎಂಬ ಭಾವವನ್ನು ಅವರಲ್ಲಿ ಉಂಟುಮಾಡಿತು. "ಇದರ ಆವಿರ್ಭಾವಕ್ಕೇ ನಾನು ಅವಳನ್ನು ಅಷ್ಟು ಪ್ರೀತಿಸಿದ್ದು. ಇದೀಗ ಮದುವೆಯ ಅರ್ಥ; ಒಲುಮೆಯ ಗುಟ್ಟು. 'ಪ್ರಜಯಾ ಹಿ ಮನುಷ್ಯಃ ಪೂರ್ಣಃ.'" ಮಗುವನ್ನು ಎತ್ತಿಕೊಂಡು ವೆಂಕೋಬರಾಯರು ಮುತ್ತಿಟ್ಟರು. ಅಂದಿನಿಂದ ಅವರ ಬಾಳು ಅದಕ್ಕೆ ಅಂಟಿಕೊಂಡಿತು. ಕವಿ ಮುಂದೆ ಹೇಳುವುದು ಆ ಸನ್ನಿವೇಶವನ್ನೆ.

ಒಂದು ದಿನದಿ ಕೂಸು ತನ್ನ,
ಬೆಳಕೆ ದ್ರವಿಸಿ ಹರಿದ ಕಣ್ಣ
ಮೊಗದಿ ನೆಟ್ಟು ಅವನ ಬೆರಳ ಬಾಯಿಗೊಯ್ಯಲು,
ರಾಮನೆಂದ "ತೀರಿತಿಂದು ಬಾಳ ಹಂಬಲು."

"ಹೌದು. ನನ್ನ ಸ್ವಂತ ಅನುಭವ. ಎಲಾ ಇದೆಲ್ಲಾ ಇವನಿಗೆ ಹೇಗೆ ಗೊತ್ತಾಯಿತು? ಆಮೇಲೆ?"

"ರಾಮರಾಯನೆಂಥ ಮನುಜ!
ಸಿರಿಯು ಘೃಣೆಯು ಹಿರಿಯು ಕಣಜ.
ಏನು ಪ್ರತಿಭೆ, ಎಂಥ ವಿನಯ!"—ಯಶದ ನುತಿಯದು
ಆತನೊಂದೆ ಬಯಕೆ ಒಲಿದು ಬರುವ ಮೊಳಗದು.

ಜಸದ ಹೆಣ್ಣು ಬಂದು ನಗಲು
ನಗೆಯು ಮೊಗದಿ ಬಿಂಬಿಸಿರಲು
ಬಾಳ ಸಂಜೆಯಲ್ಲಿ ಯಶಕೆ ರಾಮರಾಯರು
"ಬಂದೆ ಬಾಳು ಪೂರ್ಣವಾಯ್ತು" ಎಂದು ನುಡಿದರು.

ಇದೂ ಅವರ ಬಾಳಿಗೆ ಸಂಬಂಧಪಟ್ಟ ವಿಷಯವೇ. ಮಕ್ಕಳಾಗಿ, ಸಂಸಾರ ಬೆಳೆಯಲು, ಅವರನ್ನೂ ಹೆಂಡತಿಯನ್ನೂ ವೆಂಕೋಬರಾಯರು ವ್ಯಕ್ತಿಶಃ ಪ್ರೀತಿಸುವುದು ನಿಂತುಹೋಯಿತು. ಅವರುಗಳು ತಮ್ಮ ಬಾಳಿನೊಡನೆ ಬೆರೆದುಹೋಗಿದ್ದರು. ಬಿಳಲು ಬಿಟ್ಟ ಆಲದ ಮರದಂತೆ ತಮ್ಮದೂ ತಮ್ಮ ಸಂಸಾರದ್ದೂ ಒಂದೇ ಒಂದು ಬಾಳು. ಆಗ ತಮ್ಮ ಆಸೆಗೆ ಬೇರೆ

ಒಂದು ಅವಲಂಬನ ಬೇಕಾಗಿತ್ತು. ಯಶದ ಮೇಲೆ ಆ ಆಸೆ ಹೋಗಿತ್ತು. ಅವರು ಯಶಸ್ಸಂಪಾದನೆಗೆ ಮೊದಲಿನಿಂದಲೂ ಪ್ರಯತ್ನಪಡುತ್ತಿದ್ದುದು ನಿಜ. ಕೆಲವು ಕಾಲದವರೆಗೆ ಇತರ ವ್ಯಾಮೋಹಗಳಿಂದ ಈ ಆಸೆ ತಲೆ ದೋರುವುದಕ್ಕೆ ಅವಕಾಶವಿಲ್ಲದೆ ಒಳಗೇ ಹದುಗಿತ್ತು. ಈಗ ವ್ಯಕ್ತವಾಗಿ, ದೊಡ್ಡದಾಗಿ, ಅವರ ಬಾಳನ್ನು ಆಳುತ್ತಿತ್ತು. ಧನವನ್ನು ಆರ್ಜಿಸಿ ಧನಿಕ ರೆನಿಸಿಕೊಂಡರು. ದಾನವನ್ನು ಮಾಡಿ ಧಾರ್ಮಿಕರೆನಿಸಿಕೊಂಡರು. ಮೊನ್ನೆ ತಾನೆ ಮಹಾರಾಜರ ಖಾಸಾಹಾರದ ಮರ್ಯಾದೆ ಇವರಿಗೆ ದೊರಕಿತ್ತು. ಆ ದಿನವೇ ' ತನ್ನ ಬಾಳಿನ ಬಯಕೆ ಇಂದು ಪೂರ್ಣವಾಯಿತು ' ಎಂಬ ಅನು ಭವ ಅವರಿಗೆ ಉಂಟಾದದ್ದು. ಆ ದಿನ ಅವರಿಗೆ ತಮ್ಮ ಬದುಕಿನಲ್ಲಿ ಯಾವ ಆರಕೆಯೂ ತೋರಲಿಲ್ಲ. ಕವಿ ಹೇಳಿರುವುದು ಇದನ್ನೇ.

ವೆಂಕೋಬರಾಯರಿಗೆ ಪದ್ಯವನ್ನೋದಿ ಆಶ್ಚರ್ಯ ಹೆಚ್ಚಾಯಿತು. ಇಲ್ಲಿಯವರೆಗೂ ಕವಿ ಹೇಳಿರುವುದು ತಮ್ಮ ಅನುಭವವನ್ನೇ. ತಮ್ಮ ಬಾಳಿನ ಕತೆಯನ್ನೆಲ್ಲಾ ಈ ಪದ್ಯದಲ್ಲಿ ಅಡಗಿಸಿ ಇಟ್ಟಿದ್ದಾನೆ. ಗೇಣುದ್ದದವ ನಿಗೆ ಈ ಅನುಭವವೆಲ್ಲಾ ಹೇಗೆ ಗೊತ್ತಾಯಿತು? ಇಲ್ಲಿಯವರೆಗೂ ತನ್ನ ಬಾಳಿನ ಚಿತ್ರವಾಯಿತು. ತನಗೆ ಯಶದ ಮೇಲೂ ಆಸೆ ಕುಂದಿದೆ. ಜೀವನ ದಲ್ಲಿ ಅಶಾಂತಿ ಮೂಡುತ್ತಿದೆ. ಇನ್ನು ಮುಂದೆ ತನ್ನ ಬಾಳಿರುವುದು ಸ್ವಲ್ಪ ದೂರ. ಇನ್ನೆರಡು ಪದ್ಯಗಳಲ್ಲಿ ಕವಿ ಅದರ ವಿಷಯವನ್ನು ಹೇಳಿರಬಹುದು. ಏನು ಹೇಳುತ್ತಾನೋ ನೋಡೋಣ. ವೆಂಕೋಬರಾಯರು ಓದಲು ಪ್ರಾರಂಭಿಸಿದರು.

" ಇಲ್ಲಿ ಹಳ್ಳ, ಅಲ್ಲಿ ತಿಟ್ಟು "
ಎನುತ ಕೋಲ ಹಿಡಿದು ಕಿಟ್ಟು
ನಡೆಸುತಿರುವ ಪಲಿತಶಿರದ ತಾತ, ರಾಯರು.
ಕೂಸಿಗಿಂತ ತ್ರಾಣೆಯಿಲ್ಲ ಪಾಪ ರಾಯರು.

ಒಬ್ಬ ವೃದ್ಧನ ಚಿತ್ರ — ತಾವು ಮುಂದಕ್ಕೆ ಹೊಂದಬಹುದಾದ ಅವ ಸ್ಥೆಯ ಚಿತ್ರ ! ಅವರಿಗೆ ಸದ್ಯಕ್ಕೆ " ಕಿಟ್ಟು " ಯಾರೂ ಇಲ್ಲ. ತಮ್ಮ ಮಗನಿಗೆ ಕೂಸು ಹುಟ್ಟಿದರೆ ಆದು ತಮ್ಮನ್ನು ಕೋಲು ಹಿಡಿದು ನಡೆಸುವುದೇನೊ?

" ಕೂಸಿಗಿಂತ ತ್ರಾಣೆಯಿಲ್ಲ ಪಾಪ, ರಾಯರು !"

ವೆಂಕೋಬರಾಯರು ಓದಿ ನಡುಗಿದರು. ಇದಾದ ಮೇಲೆ—ಮೃತ್ಯು. ಅವರು ಆ ದಿನ ಯೋಚಿಸುತ್ತಿದ್ದುದೂ ಮೃತ್ಯುವನ್ನೇ. ಅವರಾತ್ಮವನ್ನು ಭಯವೊಂದು ಮುಸುಕಿತ್ತು. ಮೃತ್ಯು! ಕವಿ ಹೇಳುವ ಹಾಗೆ ಇನ್ನು ಮೇಲೆ ಅವರಿಗೆ ಜರೆ; ಆ ಮೇಲೆ ಮೃತ್ಯು. ಮೃತ್ಯುವೂ ಬಾಳಿನ ಒಂದು ಹಂಬಲೇನು?

ಒಂದು ದಿನದೊಳಿರುಳಿನಲ್ಲಿ
ಕಿರಣವೊಂದು ಹೊನ್ನ ಚೆಲ್ಲಿ,
ಬಾಳ ಸೆರೆಯ ಬೆಳಗೆ, ತಾತ ಚಕಿತರಾದರು;
"ಬಂದು ಬಾಳಿಗರ್ಥವಿತ್ತೆ, ಮೃತ್ಯು" ಎಂದರು.

"ಅಣ್ಣ, ಅರ್ಥವಾಗಲಿಲ್ಲ. 'ಒಂದು ದಿನದೊಳ್........ಇರುಳಿನಲ್ಲಿ.... ಕಿರಣವೊಂದು....ಹೊನ್ನ ಚೆಲ್ಲಿ'—ಮೃತ್ಯುವಿನ ಬೆಳಕಿರಬಹುದು. ಮೃತ್ಯು ಒಂದು ಬೆಳಕೆ? ಬೆಳಕೆ? ನಾನು, 'ಬಾಳು ಬೆಳಕು, ಮೃತ್ಯು ಕತ್ತಲು' ಎಂದಿದ್ದೆ. ಆಮೇಲೆ? 'ಬಾಳ ಸೆರೆಯ ಬೆಳಗೆ'— ಬಾಳ ಸೆರೆ? ಮೃತ್ಯುವು ಬಂದು, ಬಾಳು ಒಂದು ಸೆರೆಮನೆಯೆಂದು ಆತ್ಮಕ್ಕೆ ತೋರಿಸಿಕೊಟ್ಟಿತು, ಎಂದು ಇವನ ಭಾವವೇನೊ. ಅದೇ ಇರಬೇಕು. ಬಾಳು ಒಂದು ಸೆರೆಮನೆ! ಆಮೇಲೆ—'ಬಂದು ಬಾಳಿಗರ್ಥವಿತ್ತೆ, ಮೃತ್ಯು' ಏನೋ ಅರ್ಥ ಸ್ಪಷ್ಟವಾಗ ಲಿಲ್ಲ. ಇನ್ನೂ ಸ್ವಲ್ಪ ವಿಸ್ತಾರವಾಗಿ ಹೇಳಿದ್ದರೆ ಇವರಪ್ಪನ ಗಂಟೇನು ಹೋಗುತ್ತಿತ್ತು? 'ಬಂದು....ಬಾಳಿಗೆ...ಅರ್ಥವಿತ್ತೆ....ಮೃತ್ಯು' ಅರ್ಥವಿಲ್ಲ ದೆಯೂ ಇಲ್ಲ. 'ಮೃತ್ಯುವಿನಿಂದ ಮನುಷ್ಯನ ಬಾಳಿಗೆ ಒಂದು ಅರ್ಥ, ಸಾವಿಲ್ಲದಿದ್ದರೆ ಈ ಬಾಳು ನಿಷ್ಪ್ರಯೋಜನ, ಒಂದು ಭಾರ' ಎಂದು ಇವನ ಆಶಯವೋ ಏನೋ? ಸೊಗಸಾದ ಮಾತು. ಜೀವನಿಗೆ ಮೃತ್ಯುವೂ ಒಂದು ಹಂಬಲೆಂದು ಕಾಣುತ್ತದೆ. ಮೊದಲು ತಾಯಿ, ಆ ಮೇಲೆ ಕೆಳೆಯ, ಆ ಮೇಲೆ ಹೆಂಡತಿ, ಆಬಳಿಕ ಮಕ್ಕಳು, ಆಮೇಲೆ ಯಶಸ್ಸು. ಅನಂತರ.... ಮೃತ್ಯು! ಸಾವು ಮನುಷ್ಯನ ಎಲ್ಲಾ ಆಸೆಗಳ ಸಾರವೋ ಏನೋ. ಜೀವವು ಹುಟ್ಟಿ, ಬೆಳೆದು, ಪುಷ್ಟಿಯಾಗಿ, ಗರಿಕಟ್ಟಿಕೊಂಡು, ರೆಕ್ಕೆಯನ್ನು ಬಲಿಯಿಸಿ ಕೊಂಡು, ಹಾರುವುದಕ್ಕೆ ಅನುವಾಗಿರುವಾಗ ಸಾವು ಬಂದು, ಅದರ ಬಂಧನವನ್ನು ಬಿಡಿಸಿ, ಹಾರಿಸುತ್ತದೆ ಎಂಬ ಭಾವನೆ ಕವಿಗಿರಬೇಕು.

ರೆಕ್ಕೆಪುಕ್ಕ ಬಲಿತಮೇಲೆ ಹಾರುವುದಕ್ಕೆ ತವಿಸುವಾಗ ತಾನೆ, ಸ್ವಾತಂತ್ರ್ಯದ ಹಂಬಲು ಹುಟ್ಟಬೇಕಾದರೆ. ಈ ಬಾಳು, ಆತ್ಮಕ್ಕೆ ಹಾರುವ ಸಾಮರ್ಥ್ಯವನ್ನು ಗಳಿಸಿಕೊಡುವುದಕ್ಕೆ. ನನ್ನ ಬಾಳೂ ಅಷ್ಟೆ. ಒಂದು ಆಸೆಗೆ ಸತ್ತು ಇನ್ನೊಂದು ಆಸೆಗೆ ಬದುಕಿ ಈವರೆಗೂ ಸಾಗಿಹೋಯಿತು. ಹೌದು, ಈಗ ಅರ್ಥವಾಯಿತು. 'ಬಂದು ಬಾಳಿಗರ್ಥವೀವೆ, ಮೃತ್ಯು'—ಭಾವ ಚೆನ್ನಾಗಿದೆ."

ವೆಂಕೋಬರಾಯರಿಗೆ ಸಾವಿನ ಈ ನವೀನ ಭಾವ ಮನಸ್ಸನ್ನು ಹಗುರವಾಗಿ ಮಾಡಿತು; ಅವರ ಅಂದಿನ ಸಮಸ್ಯೆ ಹರಿಯಿತು. ಈ ವನಮಾಲಿ ಯಾರು? ಎಂದು ಅವರು ಮನಸ್ಸಿನಲ್ಲೇ ಕುತೂಹಲಪಟ್ಟರು. ತನ್ನ ಮಗನಿಗೆ ಗೊತ್ತಿರಬೇಕು, ಊಟಮಾಡುವಾಗ ಅವನನ್ನು ಕೇಳೋಣ, ಎಂದು ವೆಂಕೋಬರಾಯರು ಮಹಡಿಯಿಂದ ಕೆಳಕ್ಕೆ ಬಂದರು.

## (೪)

ಆ ರಾತ್ರಿ ಊಟ ಮಾಡುತ್ತಿರುವಾಗ ಮಗನನ್ನು ಕುರಿತು, ವೆಂಕೋಬರಾಯರು:—

"ವನಮಾಲಿಯ ಪದ್ಯವನ್ನು ಇವತ್ತು ಓದಿದೆ, ಸುಬ್ಬು; ಚೆನ್ನಾಗಿತ್ತು. ಯಾರಯ್ಯಾ ಈ ವನಮಾಲಿ? ವಯಸ್ಸೆಷ್ಟು?"

"ಯಾಕೆ, ಅಣ್ಣ, ವನಮಾಲಿ ಎನ್ನುವವನು ಒಬ್ಬ ತರುಣ ಕವಿ,—ಇಪ್ಪತ್ತೈದು ವರುಷದೊಳಗೆ."

"ಸುಬ್ಬು, ಒಂದು ದಿನ ಅವನನ್ನ ಮನೆಗೆ ಕರೆದುಕೊಂಡು ಬಾ; ಪದ್ಯ ಚೆನ್ನಾಗಿ ಬರೆಯುತ್ತಾನೆ, ಆತ."

"ಅದೇನಣ್ಣ, ಇಷ್ಟು ಕುತೂಹಲ, ಎಂದೂ ಇಲ್ಲದ್ದು. ಬೇಕಾದರೆ ಅವನಿಲ್ಲೇ ಇದ್ದಾನೆ—ಯಾವಾಗಬೇಕಾದರೂ ನೋಡಬಹುದು."

ಮೃದುವಾಗಿ ಭಾವಗರ್ಭಿತವಾಗಿ ಸುಬ್ಬು ನಕ್ಕನು.

ವೆಂಕೋಬರಾಯರಿಗೆ ಥಟ್ಟನೆ ಒಂದು ಯೋಚನೆ ಹೊಳೆಯಿತು; ಒಂದು ಗುಟ್ಟು ಬಿರಿಯಿತು. ಮಗನ ಮುಖವನ್ನು ಆಶ್ಚರ್ಯದಿಂದಲೂ ಸಂತೋಷದಿಂದಲೂ ಕಣ್ಣರಳಿಸಿ ನೋಡುತ್ತಾ, "ಸುಬ್ಬು, ನೀನೇನೋ ಆ

ಪದ್ಯ ಬರೆದವನು? ನೀನೇನೋ ವನಮಾಲಿ? ಆ 'ಬಾಳಿನ ಹಂಬಲು' ಬರೆದಿದೀಯಲ್ಲಾ, ಅದೆಲ್ಲಾ ನಿನಗೆ ಹೇಗೆ ಗೊತ್ತಾಯಿತೊ ಮಗು, ನಿನಗೆ ಹೇಗೆ ಗೊತ್ತಾಯಿತೊ?"

ಸುಬ್ಬು ತಲೆಯನ್ನು ತಗ್ಗಿಸಿಕೊಂಡನು. ಲಜ್ಜೆಯಿಂದಲೂ ಸಂತೋಷದಿಂದಲೂ ಅವನ ಮುಖ ಹಿಗ್ಗಿ ಅರಳಿ ಕೆಂಪಾಗಿತ್ತು.

# ಹಹ್ಹಾ ! ಒಂದು ನಕ್ಷತ್ರ !

ಶಿಶಿರ ಋತು. ಸಂಜೆ—ಸೂರ್ಯನು ಮುಳುಗಿದ ಸ್ವಲ್ಪ ಹೊತ್ತಿನಲ್ಲಿಯೇ ಅಳಿಯುವ ಸಂಜೆ. ಹೊರಗಡೆ ಇನ್ನೂ ಬೆಳಕಿತ್ತು. ಆದರೆ ಒಳಗಡೆ, ನಾನು ಕುಳಿತಿದ್ದ ಮಹಡಿಯ ಮೇಲಿನ ಹಜಾರದಲ್ಲಿ, ಮುಸುಕುಮುಸಕಾದ ಕತ್ತಲೆ. ಅದು ಪೂರ್ವಕಾಲದ ಹೆಂಚಿನ ಮನೆ. ಮಹಡಿಯ ಮೇಲೆ ಮುಕ್ಕಾಲು ಭಾಗಕ್ಕೆ ಮತ್ತೊಂದು ಚಿಕ್ಕ ಅಟ್ಟ; ಇನ್ನು ಕಾಲು ಭಾಗ ಹಾಗೆಯೇ ಬಿಟ್ಟಿತ್ತು. ಆ ಅಟ್ಟದ ಮೇಲೆ ಇಲ್ಲದ ಸಾಮಾನಿಲ್ಲ. ನಮ್ಮ ತಾತ ಮುತ್ತಾತಂದಿರ ಕಾಲದ ಮುರುಕು ಸಾಮಾನುಗಳೆಲ್ಲಾ ಅಲ್ಲಿ ಶೇಖರವಾಗಿದ್ದವು; ಜೊತೆಗೆ ಹುಲ್ಲಿನ ಹೊರೆಗಳು, ಜೋಳದ ಕಡ್ಡಿಯ ಕಂತೆಗಳು, ಎಲೆ ಪಿಂಡಿಗಳು, ಇತ್ಯಾದಿ.

ಆ ಹಜಾರಕ್ಕೆ ಎರಡು ಕಿಟಕಿಗಳು. ಎರಡೂ ಬೀದಿಯ ಕಡೆಗೆ ಉತ್ತರಕ್ಕೆ ತೆರೆಯುವುವು. ಅವೆರಡನ್ನೂ ಮುಚ್ಚಿಬಿಟ್ಟರೆ ಹಗಲು ರಾತ್ರಿಗಳ ಭೇದ ತೋರುವುದಿಲ್ಲ. ಮಧ್ಯಾಹ್ನ ಊಟಮಾಡಿ ಕಿಟಕಿಗಳನ್ನು ಮುಚ್ಚಿ ಮಲಗಿಕೊಂಡವರು ಸಾಯಂಕಾಲಕ್ಕೆ ಎದ್ದು, ಹಲ್ಲುಜ್ಜಿಕೊಂಡು, ನಾಮವನ್ನು ಅಳಿಸಿ ಸ್ನಾನಕ್ಕೆಂದು ಮಡಿಯ ಚೀಲವನ್ನು ಹೆಗಲಿಗೆ ಏರಿಸಿ ನಗೆಗೇಡಾದುದುಂಟು. ಏಣಿಯ ಹತ್ತಿರ ಒಂದು ಕಿಟಕಿ; ಅದೇ ಸಾಲಿನಲ್ಲಿ, ಮಂದಿ ಕುಳಿತುಕೊಳ್ಳುವೆಡೆಯಲ್ಲಿ, ಮತ್ತೊಂದು. ಈ ಕಿಟಕಿಯನ್ನು ಒರಗಿಕೊಂಡು ದಕ್ಷಿಣಕ್ಕೆ ನೋಡಿದರೆ ಸುಮಾರು ನಾಲ್ಕು ಗಜಗಳ ದೂರದಲ್ಲಿ ಎದುರು ಗೋಡೆಯೂ ಅದರ ಮೇಲೆ ಮಹಡಿ ಮುಚ್ಚದಿರುವ ಮನೆಯ ಮೇಲ್ಚಾವಣಿಯ ಕಾಲು ಭಾಗವೂ ಕಾಣಿಸುವುವು. ಅಲ್ಲದೆ ಆ ಗೋಡೆಯ ಹತ್ತಿರ ಓರಣಗೊಂಡ ಒಂದು ಧಾನ್ಯದ ಮೂಡೆ; ಅದರ ಮೇಲೊಂದು ಮಡಕೆ, ಆ ಮಡಕೆಯ ಮೇಲೆ ಎರಡು ಮೂರು ಕುಡಿಕೆಗಳು ; ಮಗ್ಗುಲಲ್ಲಿ ಸೀಮೆಯೆಣ್ಣೆಯ ಡಬ್ಬ, ಬುದ್ಧಿವಂತ, ಪಂಪು ; ಅದರ ಮಗ್ಗುಲಲ್ಲಿ ಗಳುವಿನ ಮೇಲೆ ನೇತಾಡುವ ಎಲೆಸರ, ಪಂಚೆ, ಇತ್ಯಾದಿ.

ಎದುರು ಕಿಟಕಿಯಿಂದ ಬೀಳುವ ಸಂಜೆಯ ನಸುಕು ಬೆಳಕು ಈ ಗೋಡೆಯನ್ನು ಮುಟ್ಟಿ, ಮೇಲುಮೇಲಕ್ಕೆ ಹೋಗುತ್ತಾ ಹೋಗುತ್ತಾ ಕ್ರಮೇಣ ಕೃಶವಾಗಿ, ಕ್ಷೀಣವಾಗಿ, ಗೋಡೆಯ ಅರ್ಧ ಭಾಗದಲ್ಲೇ ನಂದಿ ಹೋಗುವುದು. ಅದರ ಮೇಲಕ್ಕೆ ಕತ್ತಲು. ಮೇಲ್ಛಾವಣಿಯ ಹತ್ತಿರದಲ್ಲಂತೂ ಕಗ್ಗತ್ತಲು. ಈ ಮಬ್ಬು ಬೆಳಕಿನಲ್ಲಿ ಈ ಧಾನ್ಯದ ಮೂಡೆ, ಸೀಮೆಯೆಣ್ಣೆ ಡಬ್ಬ, ಎಲೆಸರ, ಮುಂತಾದ ವಸ್ತುಗಳ ಕೆಳಭಾಗ ಮಾತ್ರ ದೃಷ್ಟಿಗೆ ಗೋಚರ ವಾಗುವುದು. ಮೇಲಕ್ಕೆ ಹೋಗುತ್ತಾ ಹೋಗುತ್ತಾ ಅವುಗಳ ವ್ಯಕ್ತಿತ್ವ ವಳಿದು, ನೆಳಲಾಗಿ, ಹೊಗೆಯಾಗಿ, ಅವ್ಯಕ್ತವಾಗಿ, ಕೊನೆಗೆ ಕತ್ತಲೆಯಲ್ಲಿ ವಿಲೀನವಾಗಿ, ಅವು ಕನಸಿನಂತೆ ಕಾಣುವುವು. ಅಲ್ಲ, ಇವು ನಮ್ಮ ಪ್ರಪಂಚಕ್ಕೆ ಹೊಂದಿಕೊಂಡಿರುವ ವಸ್ತುಗಳಲ್ಲ. ಧೂಮವೊಂದೆದ್ದು ಅಲೆಅಲೆಯಾಗಿ ಮೇಲಕ್ಕೇರಿ ಹೋಗುವಾಗ ಅನೇಕ ಪಾರ್ಥಿವ ಪದಾರ್ಥಗಳ ಸಾದೃಶ್ಯವನ್ನು ತೋರಿ ಕೊನೆಗೆ ಬಾನಿನಲ್ಲಿ ಚೆದರಿಹೋಗಿದೆ!

ಬಾನು! ಬಾನು? ಮತ್ತೆ, ಅಲ್ಲಿ—ಮೇಲೆ—ಕಾಣುವುದೇನು? ಕಾರಿರುಳನ್ನು ಕಾರುವ ಚಿಕ್ಕ ಆಕಾಶ. ಅಬ್ಬ! ಈ ಆಕಾಶ ಎಷ್ಟು ಕಪ್ಪು! ಅಲ್ಲಿ ಕರಿಮೋಡಗಳು ಮುಸುಕಿಲ್ಲ—ಮೋಡಗಳಿಲ್ಲವೇ ಇಲ್ಲ. ಈ ಕಪ್ಪು ಯಾವ ಪದಾರ್ಥವನ್ನೂ ಆಶ್ರಯಿಸಿಲ್ಲ. ಬಾನು ಲೇಪಿಸಿಕೊಂಡಿರುವ ಮಸಿ ಇದು. ಎಂತಹ ರಾತ್ರಿ! ಎಂತಹ ಆಕಾಶ!

ಇದೇನು ಇಲ್ಲಿ ಇಷ್ಟು ಮೌನ—ವಿಲಯಕ್ಕೆ ಮುಂಚಿನ ಮೌನ? ಈ ಘನೀಭೂತವಾದ ಇರುಳು, ಈ ವಿಚಿತ್ರಮೌನ—ಇವುಗಳನ್ನು ಹೊದೆದು ಕೊಂಡಿರುವವನು ನಾನೊಬ್ಬನೆ; ಜೊತೆಗಾರೂ ಈ ಪ್ರಪಂಚದಲ್ಲಿರುವಂತೆ ತೋರುವುದಿಲ್ಲ.

ಆಕಾಶದಲ್ಲಿ ನಕ್ಷತ್ರಗಳೆಲ್ಲಾ ಏನಾದುವು? ಅವೂ ನಂದಿಹೋದುವೆ?

ಇದೋ ಜ್ಯೋತಿಯೊಂದು ಮೂಡಿದೆ! ಇದುವರೆಗೆ ನನ್ನ ದೃಷ್ಟಿಗೆ ಇದು ಏಕೆ ಬೀಳಲಿಲ್ಲವೊ ಕಾಣೆ. ಎಂತಹ ನಕ್ಷತ್ರ! ಅದೂ ಒಂಟಿ, ನನ್ನಂತೆ—ಈ ಇರುಳಿನಂತೆ, ಬಾನಿನಂತೆ, ಈ ಮೌನದಂತೆ,—ಅದೂ ಒಂಟಿ. ಏನು ಇದರ ಶೋಭೆ! ಇದು ಹಸುರು—ಅಲ್ಲ ನೀಲಿ—ಉಹು ಪುಷ್ಯರಾಗದ ಬಣ್ಣ.

ಆಶ್ಚರ್ಯ, ಆಶ್ಚರ್ಯ! ಇದೇನು, ಇದರ ಬೆಳಕು ಬಾನಿನ ಮಸಿಯನ್ನು

ಹೆದರಿಸಿಲ್ಲ? ಅದರೊಂದಿಗೆ ಬೆರೆದು ಹೋಗಿದೆ. ಇದು ಮಿನುಗುತ್ತಲೂ ಇಲ್ಲ; ಇದರ ಜ್ಯೋತಿ ನಿಶ್ಚಂಚಲವಾಗಿದೆ.

"ಮಿನುಗಲೆ ಮಿನುಗಲೆ ಎಲೆ ನಕ್ಷತ್ರ,
ಮಿನುಗದೆ ನೀನಿಹೆ, ಎನಗಿದು ಚಿತ್ರ!"

ಇಲ್ಲ. ಇದು ನಕ್ಷತ್ರವಿರಲಾರದು. ಇದರಲ್ಲಿ ನಕ್ಷತ್ರದ ತುಂಟ ಬೆಳಕಿಲ್ಲ. ಗಾಂಭೀರ್ಯದ ಮುದ್ದೆ ಇದು. ಹಾಗಾದರೆ ಇದು ಒಂದು ಹೊಸ ಗ್ರಹವೇನು? ಅಥವಾ ನೂತನ ಸೃಷ್ಟಿಯ ಬೇಹುಗಾರನೊ? ಎಲ್ಲಾ ವಿಚಿತ್ರವಾಗಿದೆ. ಏನು ಕಪ್ಪು, ಎಂತಹ ಆಕಾಶ—ಬಾಂಡಲೆಯನ್ನು ಮೇಲೆ ಕವಿಚಿದಂತೆ, ಏನು ನೀರವತೆ! ಇವುಗಳನ್ನೆಲ್ಲವನ್ನೂ ಹೊಂದಿಕೊಂಡಿರುವ ಚಿತ್ರತರವಾದ ಈ ನೂತನ ಜ್ಯೋತಿ! ಎಂತಹ ಲೀಲೆ, ಎಂತಹ ಮಾಯೆ, ಎಂತಹ ದೃಶ್ಯ, ಎಂತಹ ಅನುಭವ!

ಎಲ್ಲವೂ ಒಂಟಿ—ನಾನೂ ಒಂಟಿ. ಆದರೆ ಈ ಒಂಟಿತನದಲ್ಲಿ ನನಗೆ ಭಯವಿಲ್ಲ. ಒಂದು ಅನಿರ್ವಚನೀಯವಾದ ಅಪೂರ್ವವಾದ ಆನಂದದ ಹೊನಲಿನಲ್ಲಿ ನಾನು ತೇಲುತ್ತಿದ್ದೇನೆಂದು ತೋರುತ್ತದೆ. ಈ ರಾಜ್ಯಕ್ಕೆ ನಾನು ರಾಜ. ಈ ನಿಶ್ಶೃಂಖಲವಾದ ಸ್ವಾತಂತ್ರ್ಯ ನನ್ನದು. ಆಹ, ಏನು ಅನುಭವ!

* * *

"ಹೊತ್ತಾಗಲಿಲ್ಲವೆ? ಕಾಫಿ ಬೇಡವೆ?"

* * *

ಹ್ಞ, ಕಾಫಿ? ಹೊತ್ತು? ಇದೇನು ಈ ಹೊಸ ಧ್ವನಿ, ಹೊಸ ಲೋಕ?

ಕಾಫಿ, ಹೌದು, ಕಾಫಿ—ಅದೊಂದು ಭೋಗ್ಯವಸ್ತು. ಹಾಗಾದರೆ ಅದಕ್ಕೂ—ಈ ಬಾನು, ಈ ಮೌನ, ಈ ನಕ್ಷತ್ರ, ವ್ಯಕ್ತಾವ್ಯಕ್ತವಾದ ಈ ಕನಸಿನ ರೂಪಗಳು—ಇವುಗಳಿಗೂ ಏನು ಸಂಬಂಧ? ಇವು ಯಾವ ಪ್ರಪಂಚಕ್ಕೆ ಸೇರಿದವು? ನಾನಿರುವುದೆಲ್ಲಿ?

* * *

"ಕಾಫಿ ತೆಗೆದುಕೊಂಡು ಬರಲೆ?"

* * *

ಅದು ನಮ್ಮವಳ ಧ್ವನಿ. ಹೌದು, ಇದು ನಮ್ಮ ಮಹಡಿ: ಅದೊ, ನಮ್ಮ ಹೆಸರಿನ ಮೂಡೆ, ಎಲೆಸರ, ನನ್ನ ಪಂಚೆ. ನನ್ನ ಪ್ರಪಂಚವಿದು, ಕನಸಿನ ನಾಡಲ್ಲ!

"ಕಾಫಿ ತೆಗೆದುಕೊಂಡು ಬರಲೆ, ಎಂದು ಕೇಳುವುದೇನು? ತೆಗೆದು ಕೊಂಡು ಬಂದು ಇಡಬಾರದೆ?"

* * *

ಆದರೆ ಆಕಾಶ........ಎಲ್ಲಿ? ಹ ಹ್ಹ ಹ್ಹಾ, ಆಕಾಶ! ಅದೊ ನಮ್ಮ ಮನೆಯ ಸೂರು. ಆಮೇಲೆ ನಕ್ಷತ್ರ—ನಕ್ಷತ್ರ? ಹಿ ಹ್ಹಿ ಹ್ಹೀ! ಅಗೊ, ಸೂರಿನ ಸಂದಿಯಿಂದ ಇಣಕುತ್ತಿರುವ ಬಾನಿನ ಚೂರು! ಎಲಾ ಕನಸುಗಾರ, ಸೂರಿನ ಸಂದಿಯೆ ನಿನ್ನ ನಕ್ಷತ್ರ?

* * *

ಮನೆಯವಳು ತಂದಿಟ್ಟ ಕಾಫಿಯನ್ನು ಕುಡಿದು, ಅವಳ ಹೆಗಲಿಗೆ ಜಗ್ಗು ಬಿದ್ದು ಕೆಳಗೆ ಹೊರಟು ಬಂದೆ. ಬರುವಾಗ ಮೇಲ್ಛಾವಣಿಯ ಕಡೆ ದೃಷ್ಟಿ ಹೊರಳಿತು. ಅಲ್ಲಿ ಮ್ಲಾನವಾಗಿ, ಬೂದಾಗಿ, ತೇಜೋವಿಹೀನವಾಗಿ ದೊಡ್ಡ ಹಬ್ಬದೂಟದ ಉಚ್ಛಿಷ್ಟದಂತೆ ಸೂರಿನ ಸಂದಿಯಲ್ಲಿ ಬೆಳಕು ಇನ್ನೂ ಇತ್ತು. ನೋಡಿ ಬಹಳ ನಗು ಬಂತು.

ಸೂರಿನ ಸಂದಿ ನಕ್ಷತ್ರವಾಯಿತಲ್ಲಾ ಎಂದು— ಅಲ್ಲ— ನಕ್ಷತ್ರ ಸೂರಿನ ಸಂದಿಯಾಯಿತು ಎಂದು. ಅಹ್ಹಾ, ಅದೊಂದು ನಕ್ಷತ್ರ—ಸೂರಿನ ತೂತು!

# ಶಿವನ ಕಣಸು

ನನ್ನ ಸ್ನೇಹಿತ ಶಿವು ಒಂದು ಬಗೆಯ ಮನುಷ್ಯ. ಮನುಷ್ಯ ಅಂದರೆ ಮನುಷ್ಯನಲ್ಲ; ದೇವರು ಅಂದರೆ ದೇವರಲ್ಲ. ಅವನೊಂದು ಒಗಟಿ. ಅವನನ್ನು ಕಂಡರೆ ಒಂದೊಂದು ಸಲ ಭಯವಾಗುತ್ತದೆ; ಒಂದೊಂದು ಸಲ ನಗು ಬರುತ್ತದೆ; ಒಂದೊಂದು ಸಲ ಭಕ್ತಿ ಹುಟ್ಟುತ್ತದೆ; ಒಂದೊಂದು ಸಲ ಅಪ್ಪಿ ಕೊಳ್ಳೋಣ ಎನ್ನಿಸುತ್ತದೆ. ಒಟ್ಟಿನಲ್ಲಿ ಅವನನ್ನು ದೇವರೆನ್ನಬಹುದು; ಅಥವಾ ಜ್ಞಾನಿ ಎನ್ನಬಹುದು. ಅವನೊಬ್ಬ ಹುಚ್ಚನೆಂದರೂ ಸರಿಹೋಗು ತ್ತದೆ. ಅಂತೂ ಅವನು ಒಂದು ವಿಚಿತ್ರಪ್ರಾಣಿ. ಮನುಷ್ಯ ಸಾಮಾನ್ಯ ವರ್ಗಕ್ಕೆ ಸೇರಿದವನಲ್ಲ.

ಶಿವು ತೆಳುವಾದ ಎತ್ತರವಾದ ಆಳು. ಸಾಮಾನ್ಯವಾಗಿ ಬುದ್ಧಿಶಾಲಿ ಗಳಾಗಿ ಮನೋದಾರ್ಢ್ಯವುಳ್ಳವರ ಸಾಮುದ್ರಿಕೆ ಅವನ ಮುಖದಲ್ಲಿತ್ತು. ಆದರೆ ಆ ಕಂಗಳ ಚೆಲುವೇ ಬೇರೆ; ಅವುಗಳ ಭಾವವೇ ಬೇರೆ; ಅವುಗಳ ತೇಜಸ್ಸೇ ಬೇರೆ. ಅವುಗಳ ಮಂಕೂ ಒಂದು ಬಗೆ. ಇತರರಿಗೆ ಅಂಥ ಕಣ್ಣು ಗಳಿಲ್ಲ. ಆ ಕಣ್ಣುಗಳಲ್ಲಿ ದಡ್ಡರ ನಿರ್ಜೀವತೆ, ಮಹರ್ಷಿಗಳ ಪ್ರಜ್ವಲಿಸುವ ಪ್ರಜ್ಞೆ, ಹುಚ್ಚರ ಚಂಚಲತೆ, ಮಕ್ಕಳ ಸರಳತೆ ಇವೆಲ್ಲಾ ಅಡಕವಾಗಿದ್ದುವು. ಅವನ ಆತ್ಮವೂ ಅಷ್ಟೆ. ಅದರ ಆಳವನ್ನು ಬಲ್ಲವರಾರು, ಮಾಯೆಯನ್ನು ಭೇದಿಸಿದವರಾರು ?

ಅವನ ಜೀವನ ಅತಿ ಸರಳ. ಹಾಸಿಗೆ ಹೊದ್ದಿಕೆಯಿಲ್ಲದೆ ಮಲಗಿಕೊಳ್ಳ ಬಲ್ಲ; ಆದರೆ ಸುಪ್ಪತ್ತಿಗೆಯನ್ನು ಕೊಟ್ಟರೆ ಬಿಸಾಡನು. ರಾಗಿಯ ರೊಟ್ಟಿ ಯನ್ನು ತಿಂದುಕೊಂಡು ಒಂದು ವಾರ ಇರಬಲ್ಲ; ಆದರೂ ಲಾಡು ಸಮಾ ರಾಧನೆಗೆ ಒಂದು ದಿನವಾದರೂ ತಪ್ಪಿಸಿಕೊಳ್ಳುವ ಮನುಷ್ಯನಲ್ಲ. ವಿಷ ಯೋಪಭೋಗದಲ್ಲಿ ಮನಸ್ಸು ಲೀನವಾಗಿಲ್ಲದಿದ್ದರೂ ವಿಮುಖವಾಗಿಲ್ಲ. ಅದರಿಂದಲೇ, ನಮ್ಮ ದರ್ಜೆಗೆ ಮೀರಿದವನಲ್ಲ ಎಂಬ ಭಾವ ನಮ್ಮಲ್ಲಿ ಆಗಾಗ ಹುಟ್ಟುವುದು. ಈ ಮನುಷ್ಯತ್ವವೇ ಅವನಿಗೂ ನಮಗೂ ಇರುವ

ಸ್ನೇಹಸಂಬಂಧದ ಗಂಟು—ಅವನ ಬಾಳು ನಮ್ಮ ನಿಲವಿಗೆ ಎಟಕುವಂತೆ ಮಾಡುವ ಆಕರ್ಷಣೆ.

ನೀಲವಾದ ನಿರ್ಮಲವಾದ ಶರತ್ಕಾಲದ ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು. ಅದರಲ್ಲಿ ಒಂದು ಮೋಡವೂ ಇರಕೂಡದು. ಅದರ ಮಾಯೆ ಎಷ್ಟು ಗಭೀರವಾದುದು! ರೂಪವಿಲ್ಲದ ಪಾರವಿಲ್ಲದ ಅದ್ಭುತವಾದ ಗಹನವಾದ ಆಕಾಶವದು. ಮನುಷ್ಯನಿಗೂ ಅದಕ್ಕೂ ಏನೂ ಸಂಬಂಧವಿಲ್ಲ. ಅದರ ಗಭೀರತೆ ಮನುಷ್ಯನ ಅರಿವನ್ನು ಹೆದರಿಸುತ್ತದೆ. ನೋಡಿ ನೋಡಿ, ಸುಯ್ಯಲಿಟ್ಟು, ನಿರುತ್ಸಾಹದಿಂದ ಸುಮ್ಮನಾಗುತ್ತಾನೆ. ಆಗ ಅದೊಂದೇ ದೇವಮಾಯೆ. ಆ ಅದ್ಭುತದಲ್ಲಿ ಅವನಿಗೆ ಆಸಕ್ತಿಯಿಲ್ಲ. ಅದೇ ಆಕಾಶದಲ್ಲಿ ಒಂದೆರಡು ಬಿಳಿ ಮೋಡಗಳು ತೇಲಿ ಬರಲಿ—ಆಕಾಶ ಎಷ್ಟು ಅಂದವಾಗು ವುದು! ಆ ಮೋಡಗಳು ಪಾರವಿಲ್ಲದುದಕ್ಕೆ ಪಾರವೀಯುತ್ತವೆ. ನೀರೂಪ ವನ್ನು ಸರೂಪವಾಗಿ ಮಾಡುತ್ತವೆ. ಆಗ ಶೂನ್ಯದಲ್ಲಿ ಭಾವ ಉತ್ಪತ್ತಿ ಯಾಗುತ್ತದೆ. ಆ ಆಕಾಶದಲ್ಲಿ ಮನುಷ್ಯನ ಕಲ್ಪನೆಯ ವಿಹಾರಕ್ಕೆ ಸ್ಥಳವುಂಟು. ಸಹಸ್ರ ಸಹಸ್ರ ರೂಪಗಳ ಕೇಳಿಯುಂಟು. ಆ ಆಕಾಶದಲ್ಲಿ ನಮಗೆ ಆಸಕ್ತಿಯುಂಟು, ಉಲ್ಲಾಸವುಂಟು—ನಮ್ಮದೆಂದುಕೊಳ್ಳಬಹುದು. ನಮ್ಮ ಶಿವನ ಆತ್ಮ ಇಂಥ ಆಕಾಶದ ಹಾಗೆ. ಅವನ ಆಸೆಗಳು, ಅವನ ಮಮತೆಗಳು, ಭಯಗಳು, ಸುಯ್ಯಲು, ಕಿರಿಯತನ, ಹುಡುಗತನ — ಇವು ಅನಂತವಾದ ಅವನ ಆತ್ಮಕ್ಕೆ ಎಲ್ಲೆಯನ್ನಿತ್ತಿವೆ. ನೀರೂಪವಾಗಿ ರಾಗಾತೀತ ವಾದುದಕ್ಕೆ ರೂಪದ ಮಾಧುರ್ಯವನ್ನಿತ್ತಿವೆ. ಅವನನ್ನು ನಾವು ಸ್ನೇಹಿತನೆಂದು ಕರೆಯುವ ಧೈರ್ಯವನ್ನು ನಮಗೆ ಕೊಟ್ಟವೆ. ಈ ಮೋಡಗಳು ಚೆದರಿಹೋಗಿ, ನಮಗೆ ಎಟಕದ — ನಮ್ಮ ಅರಿವಿಗೆ ಮೀರಿದ — ಆತ್ಮವೆಂದು ಉಳಿದು ಕೊಳ್ಳುವುದೋ ಎಂಬ ಭಯ ನಮ್ಮನ್ನು ಆಗಾಗ ಬಾಧಿಸುತ್ತಲೇ ಇರುತ್ತದೆ —ಮನುಷ್ಯತ್ವ ಜಾರಿ ಹೋಗಿ ದೇವತ್ವ ನಿರ್ವಾಣವಾಗಿ ಎಂದು ನಿಲ್ಲುವುದೋ ಎಂಬ ಭಯ. ಮೊನ್ನೆತಾನೆ ಈ ಭಯ ಮರುಕೊಳಿಸಿತು.

ಆ ದಿನ ಶಿವು ಮೈಸೂರಿಗೆ ಬರುತ್ತಾನೆಂದು ಯಾರು ಕಂಡಿದ್ದರು? ತನ್ನ ಕಾಗದದಂತೆ ಅವನು ಮಾರನೆಯ ದಿನ ಬರತಕ್ಕವನು. ಆದ್ದರಿಂದ ಅವನನ್ನು ನಿರೀಕ್ಷಿಸದೆ ಮನೆಬಿಟ್ಟು ಹೊರಟುಹೋಗಿದ್ದೆ. ಹಿಂತಿರುಗಿ ಬರು

ವುದು ಸ್ವಲ್ಪ ತಡವಾಯಿತು. ಮನೆಗೆ ಬಂದ ಕ್ಷಣ ನನ್ನ ತಾಯಿ "ಶಿವು ಬಂದಿದಾನೆ ಕಣೊ, ಬಂದು ಆಗಲೆ ಶಾನೆ ಹೊತ್ತಾಯಿತು. ಮಹಡಿ ಮೇಲೆ ಇದಾನೆ" ಎಂದರು. ನನಗೆ ಆಶ್ಚರ್ಯವಾಯಿತು. ಸಂತೋಷವೂ ಆಯಿತು. ನಾನು ಶಿವನನ್ನು ನೋಡಿ ಆಗಲೆ ಐದಾರು ತಿಂಗಳಾಗಿದ್ದುವು. ಈಚೀಚೆಗಂತೂ ಅವನನ್ನು ನೋಡಬೇಕೆಂಬ ಹಂಬಲು ಬಹಳ ಹೆಚ್ಚಿಹೋಗಿತ್ತು. ಅವನ ಸಹವಾಸದಲ್ಲಿ ನಿಜವಾದ ಅಲೌಕಿಕವಾದ ಶಾಂತಿಯನ್ನು ನಾನು ಅನುಭವಿಸಿದ್ದೇನೆ. ಈಗ ನನ್ನ ಮನಸ್ಸು ಅನೇಕ ಕ್ಷುದ್ರ ಸಂಕಟಗಳಿಂದ ಉಲ್ಲೋಲ ಕಲ್ಲೋಲವಾಗಿ ಬಿಟ್ಟಿತ್ತು. ಬಾಳು ಬೇಸರವಾಗಿತ್ತು. ಶಿವು ಹತ್ತಿರದಲ್ಲಿದ್ದರೆ ಚೆನ್ನಾಗಿತ್ತು ಎಂದು ಎಷ್ಟೋ ಸಲ ಅಂದುಕೊಂಡಿದ್ದೆ. ನಿರೀಕ್ಷಿಸಿದುದಕ್ಕಿಂತ ಒಂದು ದಿನ ಮುಂಚಿತವಾಗಿ ಅವನ ಸಹವಾಸ ನನಗೆ ದೊರೆತುದಕ್ಕಾಗಿ ನನಗೆ ಅತ್ಯಾನಂದವೇ ಆಯಿತು. "ಊಟ ಮಾಡಿದನೆ? ಕಾಫಿ ಕೊಟ್ಟೆಯಾ, ಅಮ್ಮಾ?" ಎಂದೆ. "ಊಟಮಾಡೋದಿಲ್ಲ ಅಂದ, ಕಾಫಿ ಮೇಲೆ ಇಟ್ಟಿದ್ದೇನೆ" ಎಂದರು. ಐದಾರು ಮೆಟ್ಟಲುಗಳನ್ನು ಒಟ್ಟೊಟ್ಟಿಗೆ ಹಾರಿ ಮಹಡಿಯನ್ನು ಹತ್ತಿದೆ. ಒಳಗೆ ಕುರ್ಚಿಯ ಮೇಲೆ ಬಾಗಿಲ ಕಡೆ ಬೆನ್ನು ಮಾಡಿ ಶಿವು ಕುಳಿತಿದ್ದ. ನಿಶ್ಚಲವಾಗಿದ್ದ. ಮೇಜಿನ ಮೇಲೆ ಇಟ್ಟಿದ್ದ ಕಾಫಿ ಹಾಗೇ ಇತ್ತು.

"ಶಿವು" ಎಂದೆ. ಶಿವು ಮಾತಾಡಲಿಲ್ಲ. ಮುಂದೆ ಹೋಗಿ ನಿಂತು ನೋಡಿದೆ. ನೋಡಿ ಅವಾಕ್ಕಾದೆ. ಅವನ ಬಿಟ್ಟ ಕಣ್ಣು ಬಿಟ್ಟ ಹಾಗೆಯೇ ಇತ್ತು; ದೃಷ್ಟಿ ಅಂತರ್ಮುಖವಾಗಿತ್ತು. ಪಂಚೇಂದ್ರಿಯಗಳನ್ನು ದಾಟಿ ಹೋದ ಆತ್ಮಜ್ಞಾನಿಯ ಮಗ್ನತೆ ಇತ್ತು. ನಾನು ಬಂದ ಅರಿವೇ ಅವನಿಗೆ ಇಲ್ಲ. ಅವನು ಇಷ್ಟು ಪರವಶನಾದುದನ್ನು ನಾನು ಹಿಂದೆ ಎಂದೂ ನೋಡಿರಲಿಲ್ಲ. ನೋಡಿ ಸ್ವಲ್ಪ ಭಯವಾಯಿತು. ಅವನನ್ನೇ ದೃಷ್ಟಿಸುತ್ತಾ ನಿಂತುಬಿಟ್ಟೆ.

"ಇದೇನಯ್ಯ ನಾಣಿ, ಹೀಗೆ ದೆವ್ವಹಿಡಿದವನಂತೆ ನಿಂತು ಬಿಟ್ಟಿದ್ದೀಯ?" ಶಿವನಿಗೆ ಎಚ್ಚರವಾಗಿತ್ತು.

"ನೀನೇನೋ ಅಗಾಧವಾದ ಯೋಚನೆಯಲ್ಲಿ ಮುಳುಗಿದ್ದೆ. ನಿನ್ನ ಯೋಗವನ್ನು ನಾನೇಕೆ ಮುರಿಯಲಿ ಎಂದು ಸ್ವಲ್ಪ ಹೊತ್ತು ನಿಂತುಕೊಂಡೆ. ಅದಿರಲಿ, ಇದೇನು ನಾಳೆ ಬರುತ್ತೇನೆಂದವನು ಇವತ್ತೇ ಬಂದುಬಿಟ್ಟೆ?"

"'ನವರಾತ್ರಿಯ ಗಲಾಟೆ, ರಾತ್ರಿ ಪ್ರಯಾಣ ಬಲುಕಷ್ಟ, ಈಗಲೇ ಹೊರಡಯ್ಯ' ಎಂದು ಎಲ್ಲರೂ ಹೇಳಿದರು. 'ಹೂ' ಎಂದು ಹೊರಟು ಬಂದೆ. ಬಂದುದರಿಂದ ನಿನಗೇನೂ ತೊಂದರೆ ಇಲ್ಲವಷ್ಟೆ? ನನಗೇನೋ ಈ ಪ್ರಯಾಣ ಬಲು ಒಳ್ಳೇದು ಮಾಡಿತು—ಬಲು ಒಳ್ಳೇದು ಮಾಡಿತು. ಏನು ಗಲಾಟೆಯಯ್ಯ ರೈಲಿನಲ್ಲಿ? ನಿಂತುಕೊಂಡೇ ಬಂದೆ. ದೇಹಕ್ಕೆ ಬಲು ಕಷ್ಟ ವಾಯಿತು; ಬಹಳ ಆಯಾಸವಾಯಿತು. ಆದರೆ ಆತ್ಮಕ್ಕೆ ಹೊಸ ದೃಷ್ಟಿ ಸಿಕ್ಕಿತು. ಅದರ ಉದ್ಧಾರವಾಯಿತು ನಾಣಿ, ಉದ್ಧಾರವಾಯಿತಯ್ಯ. ಅದನ್ನೇ ಯೋಚಿಸುತ್ತಾ ಕುಳಿತಿದ್ದೆ."

ಶಿವು ಸ್ವಲ್ಪ ಹೊತ್ತು ಸುಮ್ಮನಿದ್ದ. ಅವನ ಕಣ್ಣುಗಳಲ್ಲಿ ಹೊಸ ತೇಜಸ್ಸೊಂದು ಮೂಡಿತ್ತು. ಮಾತು ಮುಗಿದಿರಲಿಲ್ಲ. ಉಕ್ಕಿ ಉಕ್ಕಿ ಬರು ತ್ತಿದ್ದ ಭಾವನಾತರಂಗಿಣಿಗೆ ಮಾತಿನ ಅಣೆಕಟ್ಟು ಕೊಚ್ಚಿಹೋಗಿದ್ದಂತೆ ತೋರಿತು. ಇಂತಹ ಸಂದರ್ಭಗಳಲ್ಲಿ ಭಾವಪ್ರಕೋಪವಾದಾಗ, ಶಿವು ಹೆಚ್ಚು ಮಾತಾಡುತ್ತಿರಲಿಲ್ಲ. ಭಾವಗಳನ್ನು ನುಂಗಿ ಬೇರೆಯ ವಿಷಯಕ್ಕೆ ಮನಸ್ಸನ್ನು ತಿರುಗಿಸಿ ಬಿಡುತ್ತಿದ್ದನು. ಈ ದಿನ ಅವನ ಆತ್ಮಕ್ಕೆ ಹೊಸ ದೃಷ್ಟಿಯೊಂದು ದೊರಕಿದ ಬಗೆಯನ್ನು ಕೇಳಬೇಕೆಂದು ನಾನು ತವಿಸಿದೆ. ಮರುಮಾತಾಡಿದರೆ ಅವನ ಮನಸ್ಸು ಬೇರೆ ಕಡೆಗೆ ತಿರುಗಿಬಿಡುವುದೋ ಏನೋ ಎಂಬ ಭಯದಿಂದ ಸುಮ್ಮನಾದೆ. ಶಿವನ ದೃಷ್ಟಿ ತಿರುಗಿ ಅಂತರ್ಮುಖ ವಾಯಿತು. "ಸುಪ್ತಮೀನ ಇವ ಹ್ರದಃ" ಎಂದು ಕಾಳಿದಾಸನು ವರ್ಣಿ ಸಿರುವ ವಸಿಷ್ಠಋಷಿಯ ಕಣ್ಣುಗಳ ಚಿತ್ರವದು. ಸ್ವಲ್ಪ ಹೊತ್ತಿನ ಮೇಲೆ ಶಿವು ಮಾತಾಡಲು ಪ್ರಾರಂಭಿಸಿದ. ನನ್ನನ್ನು ಕುರಿತಲ್ಲ—ತನಗೆ ತಾನೇ ಗಟ್ಟಿಯಾಗಿ ಯೋಚಿಸಿಕೊಳ್ಳುವನಂತೆ.

"ಹೌದು, ನಾಣು, ಆತ್ಮವನ್ನು ಹೊಸ ಬೆಳಕೊಂದು ಬೆಳಗಿತು. ಅದೊಂದು 'vision'. ಆ ಬೆಳಕು ಹೊಳೆದ ಸನ್ನಿವೇಶವನ್ನು ಮಾತ್ರ ಹೇಳ ಬಲ್ಲೆ. ಹೊಸ ಬೆಳಕು ಏನು ತೋರಿತೆಂದು ಹೇಳಲಾರೆ. ಹೇಳುವುದಕ್ಕೆ ಹೊರಟರೆ, ನಿನ್ನ ಮನಸ್ಸಿನಲ್ಲಿ ಸಮುದ್ರದ ಭಾವವನ್ನು ಉತ್ಪತ್ತಿ ಮಾಡುವು ದಕ್ಕೆ ಹೊರಟು ಹಿತ್ತಲ ಭಾವಿಯನ್ನು ತೋರಿಸಿದ ಹಾಗೆ ಆಗುತ್ತದೆ. ಒಂದು ದಿನ, ಎರಡು ವರ್ಷಗಳ ಹಿಂದೆ, ನಾನೂ ನೀನೂ ಹೊಸಹಳ್ಳಿಗೆ ಹೋಗು

ತ್ತಿದ್ದಾಗ ಕತ್ತಲಾಯಿತು. ದಾರಿ ತಪ್ಪಿ ಕಾಡಿಗೆ ಬಿದ್ದೆವು. ಮಳೆ ಬಂತು. ಜ್ಞಾಪಕವಿದೆಯೇ? ಎಂತಹ ಕತ್ತಲಯ್ಯ ಅದು! ಬೋರಲು ಬಿದ್ದ ಮಡಕೆಯ ಹಾಗೆ ನಮ್ಮನ್ನು ಹೇಗೆ ಕವಿದುಕೊಂಡಿತ್ತಯ್ಯ! ಆಗ ನಾನು ನೀನು, ಆ ಮಳೆ, ಮತ್ತು ಆ ಕತ್ತಲೆ, ಇಷ್ಟೆ ನಿಜವಾದ ವಸ್ತುಗಳು; ಮತ್ತೆಲ್ಲವೂ ಮಾಯೆ—ಅವುಗಳಿಗೆ ಅಸ್ತಿತ್ವವಿಲ್ಲ ಎಂಬ ಭಾವನೆ ನಮ್ಮಲ್ಲಿ ಹೇಗೆ ಬೇರೂರಿತು! ಆಗ ಇದ್ದಕ್ಕಿದ್ದ ಹಾಗೆ ದೊಡ್ಡ ಚಾವಟಿಯಂತಹ ಮಿಂಚೊಂದು ಹೊಳೆದು ಅವ್ಯಕ್ತವಾಗಿ ಮಾಯೆಯ ಮಡಿಲನ್ನು ಸೇರಿದ್ದ ಮಿಕ್ಕ ಪ್ರಪಂಚವನ್ನು—ಅಂದರೆ, ಆ ಮರ, ಆ ಕಾಡು, ಸ್ವಲ್ಪ ದೂರದಲ್ಲಿದ್ದ ಕೊಪ್ಪಲು, ಆ ಕೊಪ್ಪಲಿಗೆ ಹೋಗುವ ದಾರಿ, ಸುತ್ತಮುತ್ತಲ ಬೆಟ್ಟಗುಡ್ಡಗಳು—ಇವುಗಳನ್ನು ಹೇಗೆ ತೋರಿಸಿಕೊಟ್ಟಿತು! ಕೊನೆಗೆ ಆ ದಾರಿಯ ಜಾಡನ್ನು ಹಿಡಿದು ಆ ಕೊಪ್ಪಲನ್ನು ಸೇರಿದೆವು. ನನ್ನ ಆತ್ಮವೂ ಹಾಗೆಯೇ, ಸಂಶಯಗಳು ಕವಿಸಿದ್ದ ಕತ್ತಲೆಯೊಳಗೆ ಸಿಲುಕಿತ್ತು. "ಏಕೆ? ಹೇಗೆ?" ಎಂಬ ಪ್ರಶ್ನೆಗಳವು—ಬಾಳಿನ ಬಾನಿನಲ್ಲಿ ಮುಸಗುವ ಪುಷ್ಕರಾವರ್ತಕಗಳು. ಆದರೆ ಇವುಗಳ ತಿಕ್ಕಾಟದಿಂದಲೆ ಜ್ಞಾನದ—ತತ್ವದ—ಮಿಂಚು ಹುಟ್ಟಬೇಕಾದರೆ. ಸುಖವೇಕೆ? ದುಃಖವೇಕೆ? ಅವುಗಳ ಅರಿವಾದರೂ ನಮಗೇಕೆ? ಆತ್ಮಕ್ಕೆ ಇಂದ್ರಿಯಗಳ ಹಗ್ಗವೇಕೆ? ಆ ಇಂದ್ರಿಯಗಳೇಕೆ ವಿಷಯಸುಖಕ್ಕೆ ಆಸೆ ಪಡಬೇಕು? ಇಂದ್ರಿಯಸುಖಕ್ಕೆ ಎಳಸುವುದು ತಪ್ಪೆ? ವಿಷಯಗಳ ಉಪಭೋಗಕ್ಕೆ ಇಂದ್ರಿಯಗಳು, ಇಂದ್ರಿಯಗಳ ತೃಪ್ತಿಗೆ ವಿಷಯಗಳು, ಹೀಗೆ ಸೃಷ್ಟಿಯಾಗಿವೆ. ಇಂದ್ರಿಯನಿಗ್ರಹ ಸೃಷ್ಟಿಯ ತತ್ವಕ್ಕೆ ವಿರೋಧವಲ್ಲವೆ? ವಿಷಯೋಪಭೋಗದಿಂದ ಪಾಪ ಹೇಗೆ ಉತ್ಪತ್ತಿಯಾಗುತ್ತದೆ? ದ್ವಂದ್ವಗಳ ಅರ್ಥವೇನು? ಮೇಲುಕೀಳಿನ ಅಂತರವೇನು? ಬಾಳಿನ ಗುಟ್ಟೇನು? ನೋವಿನ ಮೂಲವೇನು? ಜೀವನಕ್ಕೆ ಧರ್ಮದ ಸಂಕೋಲೆ ಏಕೆ? ಒಂದಕ್ಕೊಂದಕ್ಕೆ ಸಂಬಂಧವೇನು?—ಅತಿಗಹನವಾದ ಪ್ರಶ್ನೆಗಳು, ನಾಣಿ. 'ಏಕೆ?' ಎನ್ನುವುದು ಕ್ರಾಂತಿಕಾರಿಯಾದ ಪ್ರಶ್ನೆ. ಈ ಪ್ರಶ್ನೆಯ ಸೆಳವಿಗೆ ಸಿಲುಕಿದರ ಆತ್ಮ ಚೇತರಿಸಿಕೊಂಡು ದಡವನ್ನು ಸೇರುವುದು ಕಷ್ಟ. ಬಾಳನ್ನು ಕೆಲವರು ನಂಬಿಕೆಯ ತೆಪ್ಪದಿಂದ ಸುಲಭವಾಗಿ ದಾಟುತ್ತಾರೆ. 'ಏಕೆ? ಹೇಗೆ?' ಅವರನ್ನು ಬಾಧಿಸವು. ಆದರೆ ನನಗೆ ಆ ತೆಪ್ಪವಿಲ್ಲ. ಪ್ರವಾಹದಲ್ಲಿ ಈಜಿ

ಈಜಿ ಶಕ್ತಿಗುಂದಿ ತೇಲಿ ಹೋಗುತ್ತಿದ್ದೆ. ಈ ದಿನ ಬಂಡೆಯೊಂದು ಸಿಕ್ಕಿತು.

"ಬೆಳಗ್ಗೆ ಕಾಫಿಯನ್ನು ಕುಡಿದು ಸ್ಟೇಷನ್ನಿಗೆ ಬಂದೆ. ಜೊತೆಯಲ್ಲಿ ರಂಗನೂ ಬಂದಿದ್ದ. ಗಾಡಿಯೊಳಕ್ಕೆ ತೂರುವುದು ಬಹಳ ಕಷ್ಟವಾಯಿತು. ಬಾಗಿಲು ತೆರೆದು ಒಳಕ್ಕೆ ನುಗ್ಗಿದರೆ ತಿರುಗಿ ಬಾಗಿಲನ್ನು ಹಾಕಿಕೊಳ್ಳುವುದಕ್ಕೆ ಸಾಧ್ಯವಾಗದು—ಅಷ್ಟು ಜನ. ಅಂತೂ ಇಂತೂ ಬಾಗಿಲು ಹಾಕಿ ನಿಂತು ಕೊಂಡೆ. ಇಪ್ಪತ್ತೈದು ಜನ ಕುಳಿತುಕೊಳ್ಳುವ ಗಾಡಿಯಲ್ಲಿ ಐವತ್ತಕ್ಕೆ ಮೀರಿ ಜನರಿದ್ದರು.

"ಗಾಡಿಯಲ್ಲಿ ನಾನಾ ಜಾತಿಯ, ನಾನಾ ದೇಶದ, ನಾನಾ ತರದ ಜನರು—ಬ್ರಾಹ್ಮಣರು, ಶೆಟ್ಟರು, ಗೌಡರು, ಮುಸಲ್ಮಾನರು, ಅಯ್ಯರು, ಕಣಿವೆ ಕೆಳಗಿನವರು, ಹೆಂಗಸರು, ಗಂಡಸರು, ಮಕ್ಕಳು—ಕಿಕ್ಕಿರಿದಿದ್ದರು; ರೈಲು ಹೊರಡುವುದಕ್ಕಿಂತ ಮುಂಚೆ ಅದೇನು ಗಲಾಟೆ ಮಾಡಿದರಯ್ಯ ಅವರು! ನಾನು ಕಿವಿಗೆ ಬೆರಳು ಹಾಕಿಕೊಂಡೆ. ಅವರನ್ನು ಕಂಡು ಜುಗುಪ್ಸೆ ಹುಟ್ಟಿತು. ನನಗೂ ಈ ಮನುಷ್ಯಮೃಗಗಳಿಗೂ ಏನೂ ಸಂಬಂಧವಿಲ್ಲ ಎಂದುಕೊಂಡೆ. ರೈಲು ಹೊರಟಮೇಲೆ ಸ್ವಲ್ಪ ಗಲಾಟೆ ಕಡಮೆಯಾಯಿತು. ಹಾಗೂ ಹೀಗೂ ಉದ್ದಿನ ಮೂಟೆ ಕುಲುಕಿದ ಹಾಗೆ ಜನಗಳು ಸವರಿಸಿ ಕೊಂಡು ಎಲ್ಲರೂ ಕುಳಿತರು. ನನ್ನ ಕಾಲಿನ ಹತ್ತಿರ ಒಬ್ಬ ಹಳ್ಳಿಯ ಹೆಂಗಸು ಕುಳಿತಿದ್ದಳು. ಅವಳ ಬಟ್ಟೆ ನನ್ನ ಕಾಲನ್ನು ಮುಚ್ಚಿತ್ತು. ಬಟ್ಟೆ ಅಂದೆನೆ? ಅಲ್ಲ—ಕೊಳಕುಚಿಂದಿ. ನನ್ನ ಕಾಲನ್ನು ಕತ್ತರಿಸಿಕೊಳ್ಳ ಬೇಕೆನ್ನುವಷ್ಟು ಅಸಹ್ಯವಾಯಿತು. ತಲೆಗೆ ಕೈಯೆಣ್ಣೆ. ಆ ಹೆಂಗಸು ಕೊಳೆ ಯಿಂದ ನಾರುತ್ತಿದ್ದಳು. ಕುರೂಪಿ ಬೇರೆ. ಅವಳ ತೊಡೆಯಮೇಲೆ ಒಂದು ವರ್ಷದ ಕೂಸೊಂದು. ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ. ಕಣ್ಣಿನಲ್ಲಿ ಜಿಬರೆ, ಮೂಗಿನಲ್ಲಿ ಸಿಂಬಳ. ಕತ್ತಿಗೆ ಕರಿಮಣಿ ಸರವೊಂದು. ಕೈಕಾಲುಗಳಿಗೆ ಅಲ್ಯೂಮಿನಿಯಂ ಬಳೆಗಳು. ಅವಳ ಪಕ್ಕದಲ್ಲಿ ಅವಳ ಗಂಡ —ಹೆಂಡತಿಗೆ ಸರಿಯಾದ ಗಂಡ. ಅವನ ಮಗ್ಗುಲಲ್ಲಿ ಒಬ್ಬ ಸಾಬಿ—ಗಡ್ಡದ ಸಾಬಿ. ಸಾಬಿಯ ಮಗ್ಗುಲಲ್ಲಿ ಅಯ್ಯರೊಬ್ಬ. ಅವನ ಪಕ್ಕದಲ್ಲಿ ಅವನ ಹೆಂಡತಿ—ಚೆಲುವೆ—ಸೊಗಸಾದ ರೇಷ್ಮೆ ಸೀರೆಯುಟ್ಟಿದ್ದಳು. ಕೈಯ ಬೆರಳಿನ ವಜ್ರದ ಉಂಗುರ ಕಣ್ಣಿನ ಹೊಳಪಿನೊಡನೆ ಸ್ಪರ್ಧಿಸಲು ಅನುಕೂಲ

ಮಾಡಿಕೊಟ್ಟ ಹಾಗೆ ಕೈಯನ್ನು ಕೆನ್ನೆಯ ಮೇಲೆ ಇಟ್ಟುಕೊಂಡಿದ್ದಳು. ಅವಳಿಗೂ ತೊಡೆಯ ಮೇಲೆ ಒಂದು ಮಗು—ಮುದ್ದು ಮಗು. ನಿರ್ಮಲವಾದ ಉಡುಪನ್ನು ಹಾಕಿದ್ದರು. ಕತ್ತಿಗೆ ನವಿರೆಳೆಯ ಚಿನ್ನದ ಸರವೊಂದು. ನನ್ನ ಹತ್ತಿರ ಕುಳಿತಿದ್ದ ಹಳ್ಳಿಯ ಸಂಸಾರವನ್ನು ಒಂದುಸಲ ನೋಡಿದೆ; ಆ ಅಯ್ಯರ ಸಂಸಾರವನ್ನು ಒಂದು ಸಲ ನೋಡಿದೆ. ಒಂದಕ್ಕೊಂದಕ್ಕೆ ಸಂಬಂಧವಿಲ್ಲ ಎನ್ನಿಸಿತು. ಹೀಗೆಯೆ ಆ ಗಾಡಿಯಲ್ಲಿ ಕುರೂಪಿಗಳು—ಸುರೂಪಿಗಳು, ಬಡವರು — ಧನಿಕರು, ಸಾಧುಗಳು — ದುಷ್ಟರು, ಒಬ್ಬರ ಮಗ್ಗುಲಲ್ಲಿ ಇನ್ನೊಬ್ಬರು ಕುಳಿತಿದ್ದರು. ತಿರುಗಿ ಮನಸ್ಸಿಗೆ 'ಏಕೆ?' ಎಂಬ ಪ್ರಶ್ನೆಯೂ ಹೊಕ್ಕಿತು. 'ಮನುಷ್ಯನಿಗೂ ಮನುಷ್ಯನಿಗೂ ರೂಪ ಸಂಪತ್ತುಗಳಲ್ಲಿ, ಗುಣದೋಷಗಳಲ್ಲಿ ಈ ಅಂತರವೇಕೆ?' ಆ ಮೇಲೆ 'ಹೇಗೆ?' ಎಂದು ಇನ್ನೊಂದು ಸಮಸ್ಯೆಯೂ ನುಸುಳಿತು. 'ಭೇದದಲ್ಲಿ ಅಭೇದವನ್ನು ಕಾಣುವುದು ಹೇಗೆ? ಪ್ರಕೃತ್ಯಾ ಅಸಮವಾಗಿರುವುದರಲ್ಲಿ ಸಮತ್ವವನ್ನು ಕಾಣುವುದು ಹೇಗೆ? ಸಮದರ್ಶಿಯಾಗುವುದು ಹೇಗೆ?'

"ರೈಲು ಕದಲುತ್ತಿತ್ತು. ಗಾಡಿಯಲ್ಲಿ ಕುಳಿತಿದ್ದ ಜನಗಳ ಮನಸ್ಸು ಬಿಚ್ಚಿ ಮೃಗತ್ವವಳಿದು ಮನುಷ್ಯತ್ವ ಹೊರಹೊಮ್ಮುತ್ತಿತ್ತು. ಕೆಲವರು ಹಾಡುವುದಕ್ಕೆ ಪ್ರಾರಂಭಿಸಿದರು. ಮತ್ತೆ ಕೆಲವರು ಇತರರನ್ನು ಹಾಡುವುದಕ್ಕೆ ಚೋದನ ಮಾಡುತ್ತಿದ್ದರು. 'ಇಲ್ಲಿ ಬನ್ನಿ ಅಂದರೆ, ಕೂತುಕೊಳ್ಳಿ; ಹೇಗಾದರೂ ಸವರಿಸಿಕೊಂಡು ಹೋಗೋಣ.' 'ಸಾಬರೆ ನೀರು ಬೇಕೆ?' 'ಏ ಅಮ್ಮಾ, ಮಗು ಎಲ್ಲಾದರೂ ಬಿದ್ದೀತು, ಘಟ್ಟಿಯಾಗಿ ಹಿಡುಕೊ.' 'ಸುಣ್ಣ ಕೊಡುತೀಯೇನಣ್ಣಾ ಸ್ವಲ್ಪ.'—ಮುಂತಾದ ಸೌಹಾರ್ದದ ಮಾತುಗಳು ಆಗಾಗ ಕಿವಿಗೆ ಬೀಳುತ್ತಿದ್ದುವು. ಕ್ಲೋಸ್‌ಪೇಟಿಯಲ್ಲಿ ಅಯ್ಯರು ಹೆಂಡತಿಗೆ ಎಳನೀರು ತೆಗೆದುಕೊಟ್ಟ; ಗೌಡ ವಡೆ ತೆಗೆದುಕೊಟ್ಟ. ಅಯ್ಯರ ಮಗು ಅಮ್ಮನ ಕುರುಳನ್ನು ಎಳೆಯುತ್ತಿತ್ತು, ನೋಡಿ ಗಂಡ ನಗುತ್ತಿದ್ದ: ಗೌಡನ ಮಗು ಎಲೆಅಡಕೆ ಚೀಲವನ್ನು ತಲೆಕೆಳಗುಮಾಡಿ ಹೊಗೆಸೊಪ್ಪನ್ನು ಕೆಳಗೆ ಚೆಲ್ಲಿತು. ರೈತನ ಹೆಂಡತಿ ನಗುತ್ತಿದ್ದಳು. ಇನ್ನೊಬ್ಬ ತನ್ನ ಮುಪ್ಪಿನ ತಾಯಿಗೆ ಸ್ಥಳ ಮಾಡಿಕೊಟ್ಟು ತಾನು ಕಿಷ್ಕಿಂಧದಲ್ಲಿ ನಿಂತಿದ್ದ. ಮತ್ತೊಬ್ಬನು ತನ್ನ ತಂಗಿಗೆ ಜಾಗ ಮಾಡಿಕೊಡೋಣವೆಂದು ಪೇಚಾಡುತ್ತಿದ್ದ.

ಹೀಗೆಯೆ . . . ಅದೊಂದು ದೊಡ್ಡ ಸಂಸಾರ. ಆ ಸಂಸಾರದಲ್ಲಿ ಪ್ರವಹಿಸುವ ಮನುಷ್ಯತ್ವವೊಂದೆ. ಕೃಷಕ ದಂಪತಿಗಳ ಹೃದಯದಲ್ಲಿ ಹೊರಹೊಮ್ಮುತ್ತಿದ್ದ ಪುತ್ರಪ್ರೇಮವೂ, ಆ ಅಯ್ಯರು ಗೃಹಸ್ಥರಲ್ಲಿ ಉಕ್ಕುತ್ತಿದ್ದ ಪುತ್ರಪ್ರೇಮವೂ ಒಂದೇ. ಈ ಪ್ರೇಮಕ್ಕೆ ಬಹಿರಾವರಣಗಳ ಅಣೆಯಿಲ್ಲ. ರೈತನ ಹುಡುಗನು ಮನ್ಮಥನಾಗಿದ್ದರೆ ಅವನು ಅದನ್ನು ಇದಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿರ ಲಿಲ್ಲ. ಅಯ್ಯರ ಹುಡುಗ ಕುರೂಪಿಯಾಗಿದ್ದರೂ ಆತ ಇದಕ್ಕಿಂತ ಕಡಮೆ ಯಾಗಿ ಪ್ರೀತಿಸುತ್ತಿರಲಿಲ್ಲ. ಆಮೇಲೆ ಪತ್ನೀಪ್ರೇಮವೂ ಅಷ್ಟೆ. ಅಲ್ಲಿ ಕುಳಿತಿದ್ದನಲ್ಲ ಆ ಶೆಟ್ಟಿ— ಆತನ ಹೆಂಡತಿಯೇನು ರತಿಯೆ? ಆದರೂ ಅವಳಿಗೆ ಆತ ತ್ರಾಹಿ ತ್ರಾಹಿ ಎನ್ನುತ್ತಿದ್ದನು. ಅಯ್ಯರು ತನ್ನ ರತಿಯಂತಹ ಹೆಂಡತಿಯನ್ನು ಆ ಶೆಟ್ಟಿಗಿಂತಲೂ ಹೆಚ್ಚಾಗಿ ಪ್ರೀತಿಸಲಾರ. ನಮ್ಮ ಗೌಡನೂ ಅಷ್ಟೆ; ನಾನೂ ಅಷ್ಟೆ. ಈ ಪ್ರೇಮ ರೂಪಭೇದಗಳನ್ನು ದಾಟಿ ಜೀವವನ್ನು ಅದು ಇರುವಂತೆ ನೋಡುತ್ತದೆ. ಈಗ ನನ್ನ ಹೆಂಡತಿಯೇನು ಚೆಲುವೆಯೆ? ಆದರೆ ನನ್ನ ಪ್ರೇಮಕ್ಕೆ ಅವಳು ಚೆಲುವೆಯೋ ಅಲ್ಲವೋ ಎಂದು ನಿಂತು ನೋಡುವುದಕ್ಕೆ ಪುರುಸತ್ತಿಲ್ಲ. ಅಂದರೆ ಪ್ರೇಮಿಗಳಿಗೆ ಕುರೂಪಸುರೂಪಗಳ, ಗುಣದೋಷಗಳ ಭೇದ ಕಾಣಿಸುವುದೇ ಇಲ್ಲ. ಅಂದರೆ ಸಮದರ್ಶಿಯಾಗಬೇಕಾದರೆ ಪ್ರೇಮಿಯಾಗಬೇಕು. ರೂಪಭೇದ ಗಳಲ್ಲಿ ಅಂತರ್ವಾಹಿನಿಯಾಗಿ ಹರಿಯುವ ಜೀವವನ್ನು, ಈ ಬಹಿರಾವರಣ ಗಳನ್ನು ಭೇದಿಸಿ ಕಾಣುವ ದೃಷ್ಟಿಯುಳ್ಳವನಾಗಿರಬೇಕು. ಪ್ರೇಮವೆಂಬುದು ಒಂದು ತರದ X-ray. ಈ ಹೊಸ ದೃಷ್ಟಿ ಹುಟ್ಟಿದರೆ ಸಮದರ್ಶಿಯಾಗು ವುದು ಅತಿ ಸುಲಭ. ಆದರೆ, ಈ ದೃಷ್ಟಿಯನ್ನು ಹೊಂದುವುದು ಹೇಗೆ?"

ಶಿವು ಸ್ವಲ್ಪ ಹೊತ್ತು ಸುಮ್ಮನಾದ. ನನ್ನ ಮನಸ್ಸಿನ ಪರಿಸ್ಥಿತಿಯನ್ನು ನಾನು ವರ್ಣಿಸಲಾರೆ. ಯಾವುದೋ ಒಂದು ಸ್ವರ್ಗೀಯ ಗಾನದ ಅಲೆ ಯೊಂದು ನನ್ನ ಎದೆಯ ಮೇಲೆ ಬಿದ್ದು ಭಗ್ನವಾಗುವ ಅನುಭವವಾಗು ತ್ತಿತ್ತು. ನಿದ್ರೆಯನ್ನು ಸಡಿಲಿಸಿ, ಕತ್ತಲನ್ನು ಹೆದರಿಸದೆ, ಅದರ ಮಧ್ಯದಲ್ಲಿ ಮೆಲ್ಲನೆ ಮೊಳೆಯುವ ಜ್ಯೋತಿಯೊಂದರ ಉದಯ ನನ್ನ ಮನದಲ್ಲಿ ಮೊಳೆತಿತ್ತು. ಶಿವನ ಹಾಗೆ ನಾನೂ "ಹೇಗೆ? ಪ್ರೇಮಿಯಾಗುವುದು ಹೇಗೆ?" ಎಂದುಕೊಳ್ಳುತ್ತಿದ್ದೆ.

ಶಿವು ತಿರುಗಿ ಪ್ರಾರಂಭಿಸಿದ. ಈಗ ನುಡಿ ಧೀರಗಂಭೀರವಾಗಿತ್ತು.

"ಈ ದೃಷ್ಟಿಯನ್ನು ಹೊಂದುವುದು ಹೇಗೆ? ಪ್ರೇಮಿಯಾಗುವುದು ಹೇಗೆ?"

"ತಾಯಿಗೆ ತನ್ನ ಮಕ್ಕಳ ವಿಷಯದಲ್ಲಿ ಅವರ ಗುಣರೂಪಗಳ ಆವರಣವನ್ನು ಒಳಹೊಕ್ಕು ಜೀವವನ್ನು ಸ್ವಚ್ಛತೆಯಲ್ಲಿ — ಅದರ ನೈಜತೆಯಲ್ಲಿ — ನೋಡುವ ಶಕ್ತಿಯುಂಟು. ಕುಟುಂಬಿಗಳು ತಮ್ಮ ತಮ್ಮ ಸಂಸಾರವನ್ನು ಈ ದೃಷ್ಟಿಯಿಂದ ನೋಡಬಲ್ಲರು. ಆದರೆ ಎಲ್ಲೆಡೆಯಲ್ಲಿಯೂ ಎಲ್ಲದರಲ್ಲಿಯೂ ಸಮದರ್ಶಿಯಾಗುವುದು ಹೇಗೆ? ಒಂದೇ ಒಂದು ಮಾರ್ಗ, ನಾಣು — ವಿಶ್ವವನ್ನು ಒಂದು ಕುಟುಂಬವಾಗಿ ಭಾವಿಸುವುದು. ಅಂದರೆ, ನಮಗೂ ಅದಕ್ಕೂ ನಿಕಟವಾದ ಸಂಬಂಧವೊಂದನ್ನು ಕಲ್ಪಿಸಿಕೊಳ್ಳುವುದು. ಇದೊಂದು ಒಗಟಿ ಎನ್ನುವೆಯೇನೊ? ಹೌದು ಒಗಟಿ. ನನಗೂ ನನ್ನ ತಾಯಿಗೂ ಇರುವ ಸಂಬಂಧವನ್ನು ನಾನು ಕಾಣಬಲ್ಲೆ, ಅನುಭವಿಸಬಲ್ಲೆ. ಆದರೆ ನನಗೂ ನನ್ನ ಹತ್ತಿರ ಕುಳಿತು ನಾರುತ್ತಿದ್ದ ಆ ಹಳ್ಳಿಯ ಹೆಂಗಸಿಗೂ ಏನು ಸಂಬಂಧ? ಸಂಬಂಧವನ್ನು ಕಲ್ಪಿಸಿಕೊಳ್ಳುವುದು ಹೇಗೆ? ಹೌದು, ಗಹನವಾದ ಒಗಟಿ, ನಾಣು."

ಶಿವು ಸ್ವಲ್ಪ ಹೊತ್ತು ಮಾತನಾಡದೆ ಸುಮ್ಮನಿದ್ದು, ತಿರುಗಿ ಪ್ರಾರಂಭಿಸಿದ.

"ರೈಲು ಮದ್ದೂರನ್ನು ಸೇರಿತು. ನಾನು ಕಾಫಿ ಕುಡಿದು ಒಳಕ್ಕೆ ಬಂದೆ. ಕಾಫಿ ಕುಡಿದುದು ಒಳ್ಳೆಯದಾಯಿತು. ಮನಸ್ಸು ಯಾವ ಯೋಚನೆಯೂ ಇಲ್ಲದೆ ನಿರ್ಮಲವಾಗಿತ್ತು? 'ಹೇಗೆ' ಎಂಬ ಪ್ರಶ್ನೆ ತಿರುಗಿ ಸುಳಿದು ತೊಂದರೆ ಕೊಡಲಿಲ್ಲ.

"ಏನೂ ಕೆಲಸವಿಲ್ಲದೆ ಜನರನ್ನೆಲ್ಲ ಸುಮ್ಮನೆ ನೋಡುತ್ತಾ ಕುಳಿತೆ. ಅವರು ಮನುಷ್ಯರೆಂಬುದು ಏಕೋ ಹೇಗೋ ಮರೆತುಹೋಯಿತು. ಬಾಸ್ ಬಂಗಲೆಗೆ ಹೋಗಿ ಮೃಗಗಳನ್ನು ಕೌತುಕಕ್ಕೆ ನೋಡುವಂತೆ, ಅವರನ್ನು ನನ್ನಿಂದ ಪ್ರತ್ಯೇಕಿಸಿ ನೋಡುತ್ತಾ ನಿಂತುಬಿಟ್ಟೆ. ನನಗೆ ಕಂಡುದೇನು? ಎರಡೆರಡು ಕಣ್ಣುಗಳು, ಪ್ರತಿಯೊಬ್ಬ ಮನುಷ್ಯನಲ್ಲಿಯೂ ಎರಡೆರಡು ಕಣ್ಣುಗಳು, ಕೆಲವು ಅಗಲವಾಗಿ, ಹೊಳೆಯುತ್ತಿದ್ದುವು. ಕೆಲವದರಲ್ಲಿ

ಮುಂಕಿತ್ತು—ಜಾಡ್ಯವಿತ್ತು. ಆದರೆ ಅವುಗಳ ಮಾಟವೊಂದೇ, ವ್ಯಕ್ತಿಗ್ರಹಣ ಗುಣ ಒಂದೇ. ಅಲ್ಲದೆ ಎಲ್ಲರಿಗೂ ಒಂದೊಂದು ಮೂಗು, ನಾನಾ ವಿಧದ ಮೂಗು. ಆದರೆ ಅವುಗಳ ಮಾಟ ಒಂದೇ; ಘ್ರಾಣಗ್ರಹಣಗುಣ ಒಂದೇ. ಎರಡೆರಡು ತುಟಿಗಳು, ಕೆನ್ನೆಗಳು, ಹುಬ್ಬುಗಳು, ತೋಳುಗಳು, ಕೈಗಳು, ಮತ್ತು ಇತರ ಅಂಗಗಳು, ಎಲ್ಲರಿಗೂ ಒಂದೇ ತರದವು. ಅಲ್ಲಿ ಇಲ್ಲಿ ರೂಪ ಭೇದಗಳಿದ್ದರೂ ಎಲ್ಲಾ ಒಂದೇ ಜಾತಿಗೆ ಸೇರಿದವು. ಅವುಗಳಿಗೆ ನಿಯತ ವಾಗಿರುವ ಕರ್ಮಗಳೂ ಒಂದೇ ಬಗೆಯುವು. ಆಮೇಲೆ, ಸುಖವುಂಟಾದರೆ ಅವರು ನಗುವ ನಗೆಯೊಂದೇ ಬಗೆ. ದುಃಖವುಂಟಾದರೆ ಒಂದೇ ತರದ ಅಳು, ಮುಯ್ಯಲು. ಒಂದೇ ಬಗೆಯ ದ್ವೇಷ, ಸ್ನೇಹ, ಅಸೂಯೆ. ತಮ್ಮ ತಮ್ಮ ಮಗುವನ್ನು— ಮಗು ಎಂಥದಾದರೂ ಸರಿಯೆ — ಕಂಡರೆ ಒಂದೇ ತರದ ವ್ಯಾಮೋಹ. ತಮ್ಮ ತಮ್ಮ ಬಂಧುಬಳಗಗಳಲ್ಲಿ ಅವರು ತೋರುವ ರಾಗದ್ವೇಷಗಳೆಲ್ಲಾ ಒಂದೇ ಬಗೆಯುವು. ತಮ್ಮ ಬಾಳಿನಿಂದ ಸ್ವಲ್ಪ ಹೊರಕ್ಕೆ ಬಂದರೆ ಎಲ್ಲರಿಗೂ ಒಂದೇ ತರದ ದಯೆ, ಸೌಹಾರ್ದ. ನೋಡಿದೆ. ಹೌದು, ಒಂದೇ. ಅಲ್ಲಿ ಇಲ್ಲಿ ರೂಪಗುಣಗಳಲ್ಲಿ ಸ್ವಲ್ಪ ತಗ್ಗುತಿಟ್ಟುಗಳಿರ ಬಹುದು. ಆದರೆ ಸತ್ವವೊಂದೇ. ಒಂದೇ ತರದ ಮೂಗು, ಬಾಯಿ, ಕಣ್ಣು, ನಗೆ, ಅಳು, ವ್ಯಾಮೋಹ, ದಯೆ, ದ್ವೇಷ, ಸ್ವಾರ್ಥತೆ — ಭಾವ ವ್ಯಕ್ತ ವಾಗುವುದರಲ್ಲಿ ಏರಿಳಿತಗಳಿರಬಹುದು, ಆದರೆ ಭಾವ ಒಂದೇ. ಜನಗಳನ್ನು ಹೀಗೆ ವ್ಯಕ್ತಿದೃಷ್ಟಿಯಿಂದ ನೋಡುತ್ತಾ ಇರುವಾಗ ಥಟ್ಟನೆ ಈ ರೂಪ ಗುಣಗಳ ವೈವಿಧ್ಯಗಳು ಯಾವುದೋ ಒಂದಕ್ಕೆ ಪೋಣಿಸಿದ್ದ ಹಾಗೆ ತೋರಿ ದುವು. ನಿಜವಾಗಿಯೂ, ಪೋಣಿಸಿದ್ದ ಹಾಗೆ ತೋರಿದುವು. 'ಒಂದೇ ಒಂದು ಜೀವದ ಅನೇಕ ಪ್ರಾದುರ್ಭಾವಗಳಿವು; ಈ ಪ್ರಾದುರ್ಭಾವದಲ್ಲಿ ಒಂದು ಹೆಚ್ಚು ಸ್ಫುಟವಾಗಿದೆ, ಹೆಚ್ಚು ಪೂರ್ಣವಾಗಿದೆ; ಇನ್ನೊಂದರಲ್ಲಿ ಈ ಪರಿಸ್ಫುಟತೆಯಿಲ್ಲ, ಕುಂದುಂಟು. ಆದರೇನು? ಒಂದೇ ಜೀವದ ಪ್ರಾದು ರ್ಭಾವಗಳೀ ಸಹಸ್ರ ಸಹಸ್ರ ರೂಪಗಳು' ಎಂದು ಹೊಸ ಬೆಳಕೊಂದು ತೋರಿಸಿಕೊಟ್ಟಿತು, ನಾಣು. ಆಗ ಎಲ್ಲಾ ಅರ್ಥವಾಯಿತು. ಒಂದು ಮಾವಿನ ಮರವನ್ನು ತೆಗೆದುಕೊ. ಎಲೆಗಳ ಮಾಟವೊಂದೇ. ಮಾವಿನ ಮರದಲ್ಲಿ ಪ್ರವಹಿಸುವ ಒಂದೇ ಜೀವಸತ್ವದ ಪ್ರಾದುರ್ಭಾವಗಳಿವು. ಆದರೆ

ಒಂದು ಎಲೆಯಂತೆ ಇನ್ನೊಂದಿಲ್ಲ. ಕೆಲವನ್ನು ಹುಳುಗಳು ತಿಂದಿವೆ. ಕೆಲವಕ್ಕೆ ಕಜ್ಜಿ. ಕೆಲವು ಹಣ್ಣೆಲೆಯಾಗಿ ಕೆಳಕ್ಕೆ ಉದುರುತ್ತವೆ. ಕೆಲವು ಚಿಗುರಿ ಗಾಳಿಯಲ್ಲಿ ಕುಣಿಯುತ್ತವೆ. ಕೆಲವು ಸೊಟ್ಟು, ಡೊಂಕು. ಕೆಲವು ಮೃದುವಾಗಿ ಕೋಮಲವಾಗಿ ನೀಳವಾಗಿ ಸೌಂದರ್ಯದ ತುದಿಗೆ ಏರಿವೆ. ಆದರೆ ಒಂದಕ್ಕೊಂದರ ಸಂಬಂಧ ಒಂದೇ. ಅವುಗಳಲ್ಲಿ ಹರಿಯುವ ಜೀವ ಒಂದೇ.

"ಅವ್ಯಕ್ತತೆಯ ಕತ್ತಲೆಯಿಂದ — ಸೆರೆಯಿಂದ — ತಪ್ಪಿಸಿಕೊಳ್ಳುವುದಕ್ಕೆ ವಿಚಿತ್ರವಾದ, ಗಹನವಾದ, ಮನುಷ್ಯನ ಅರಿವಿಗೆ ನಿಲುಕದ, ಜೀವಸತ್ವವೊಂದು ಹೋರಾಡುತ್ತ ಅನೇಕ ಕೋಟಿ ರೂಪಗಳಲ್ಲಿ ತಾನು ವಿಕಾಸಗೊಳ್ಳಲು ಯತ್ನಿಸುತ್ತಿರುವ ಚಿತ್ರ ಕಣ್ಣಿಗೆ ಕಟ್ಟಿತು. ಆ ಜೀವದ ಹೊನಲಿನ ಕಾಲುವೆಯೊಂದು ಮನುಷ್ಯತ್ವದಲ್ಲಿ ವಿಕಾಸಗೊಳ್ಳಲು ಯತ್ನಿಸುವುದೂ ಕಾಣಬಂದಿತು. ಹೌದು, ನಾಣಿ, ಒಂದೇ ಜೀವದ ಅನೇಕ ರೂಪಗಳು ನಾವು. ಈ ಹೊಸ ದೃಷ್ಟಿಯಿಂದ ಗಾಡಿಯಲ್ಲಿ ಕುಳಿತಿರುವವರನ್ನೆಲ್ಲಾ ನೋಡಿದೆ. ಮನಸ್ಸಿಗೆ ಅಪಾರವಾದ — ನನ್ನ ಅಸ್ತಿತ್ವವನ್ನೂ ಕೊಚ್ಚಿಕೊಂಡು ಹೋಗುವಷ್ಟು — ಪ್ರೇಮವೊಂದು ಹುಟ್ಟಿತು. ಆ ಮನುಷ್ಯನಲ್ಲಿ, ಈ ಮನುಷ್ಯನಲ್ಲಿ ಕುಂದಿರುವವರಲ್ಲಿ, ಅಜ್ಞಾನಿಗಳಲ್ಲಿ, ಪರಿಸ್ಫುಟವಾಗದೆ ಸೆರೆಸಿಕ್ಕಿರುವ ಜೀವಸತ್ವದ ಹೋರಾಟವನ್ನು ಕಂಡು ಅಪಾರವಾದ ಮರುಕ ಹುಟ್ಟಿತು. ಅಂದು ನಾನೊಬ್ಬ ವಿಶ್ವಕುಟುಂಬಿ. ಆ ಗಾಡಿಯಲ್ಲಿದ್ದವರೆಲ್ಲ ನನ್ನ ಬಂಧುಗಳು. ನನಗೂ ಅವರಿಗೂ ಇರುವ ಸಂಬಂಧ ಅತಿ ನಿಕಟವಾದುದು. ನನ್ನ ಕಾಲಿನ ಕೆಳಗೆ ಕುಳಿತಿದ್ದ ಹಳ್ಳಿಯ ಹೆಂಗಸು ನನಗೆ ಜಿಹಾಸೆ ಹುಟ್ಟಿಸಲಿಲ್ಲ. ಅಯ್ಯರ ಹೆಂಡತಿ ಮೋಹವನ್ನೂ ಹುಟ್ಟಿಸಲಿಲ್ಲ. ಒಂದೇ ಜೀವದ ಎರಡು ಕವಲುಗಳು ಎಂಬಂತೆ ಇಬ್ಬರೂ ತೋರಿದರು. ಒಬ್ಬೊಬ್ಬಳೂ ನನ್ನ ತಾಯಿಯಾಗಬಹುದು, ತಂಗಿಯಾಗಬಹುದು: ಆ ಸಮಯದಲ್ಲಿ ಎಲ್ಲರಲ್ಲೂ ನನಗೆ ಒಂದೇ ವಿಧವಾದ ಪ್ರೇಮ. ನಾವೆಲ್ಲಾ ಒಂದೇ ಜೀವದ ಕವಲುಗಳು! ಆಗ ಧರ್ಮಾಧರ್ಮಗಳ ಮೂಲತತ್ವ ಹೊಳೆಯಿತು. ಒಂದು ಗರಿಕೆಗೂ ನಕ್ಷತ್ರಕ್ಕೂ ಇರುವ ಸಂಬಂಧ ತಿಳಿಯಿತು. ಒಂದು ಸತ್ವದಲ್ಲೇ ಇವೆಲ್ಲವೂ ಮಾಲೆಗೊಂಡಿವೆ. ಈ ದೃಷ್ಟಿಯಿಂದ ಒಬ್ಬನನ್ನು ಮತ್ತೊಬ್ಬನು ದ್ವೇಷಿಸುವುದು ಅಸಾಧ್ಯ. ಕುರೂಪಿ — ಸುರೂಪಿ ಎಂಬ ಭೇದಭಾವಗಳು ಹುಟ್ಟು

ವುದೂ ಅಸಾಧ್ಯ. ನಮ್ಮ ಆತ್ಮಕ್ಕೆ ದ್ರೋಹವನ್ನು ಉಂಟುಮಾಡಿಕೊಳ್ಳದೆ ಇನ್ನೊಬ್ಬನನ್ನು ಸಂಕಟಪಡಿಸುವುದು ಅಸಾಧ್ಯ. ಅಸಾಧ್ಯ, ನಾಣಿ, ಅಸಾಧ್ಯ. ನಮ್ಮ ಆತ್ಮಕ್ಕೆ ದ್ರೋಹವೆಣಿಸದೆ — ಅಂದರೆ, ನಮ್ಮನ್ನು ನಾವೇ ದ್ವೇಷಿಸಿಕೊಳ್ಳದೆ, ಹಿಂಸಿಸಿಕೊಳ್ಳದೆ, ಹೀಯಾಳಿಸಿಕೊಳ್ಳದೆ, ಇನ್ನೊಬ್ಬನನ್ನು ದ್ವೇಷಿಸುವುದು, ಹಿಂಸಿಸುವುದು, ಅವಹೇಳನ ಮಾಡುವುದು, ನಿಂದಿಸುವುದು, ಕ್ಲೇಶಗೊಳಿಸುವುದು, ಭೇದಭಾವಗಳನ್ನು ತೋರುವುದು, ಉಚ್ಚನೀಚಗಳನ್ನು ಅಳೆಯುವುದು, ಅಸಾಧ್ಯ. ನಾವು ಧರ್ಮಾಚರಣೆ ಮಾಡುವುದು ಇದಕ್ಕೆ— ನಮ್ಮ ಆತ್ಮೋದ್ಧಾರಕ್ಕೆ. ನಮ್ಮೆಲ್ಲರಲ್ಲಿ ಅಂತರ್ವಾಹಿನಿಯಾಗಿ ವಿಕಾಸಗೊಳ್ಳಲು ಹೋರಾಡುತ್ತಿರುವ ಜೀವಸತ್ವದ ಕ್ಷೇಮಕ್ಕೆ. ಇದೇ ಧರ್ಮಮೂಲ, ನಾಣಿ. ನನ್ನ ಮನಸ್ಸಿನಲ್ಲಿರುವುದನ್ನು ಹೇಳಲಾರೆ. ಜೀವನದ ಸಮಸ್ಯೆಯನ್ನು ಈ ಹೊಸ ದೃಷ್ಟಿಯಿಂದ, ಈ ಹೊಸ ಬೆಳಕಿನಿಂದ, ನೋಡಿದರೆ ಎಲ್ಲಾ ಅರ್ಥವಾಗುತ್ತದೆ— ಎಲ್ಲಾ ಅರ್ಥವಾಗುತ್ತದೆ. ಜೀವವೊಂದು ಅಗಾಧವಾದ ನಿಜವಾದ ವಸ್ತು. ಅದೊಂದಕ್ಕೇ ಅಸ್ತಿತ್ವವಿರುವುದು. ಜೀವವು ಮಾಯೆಯಲ್ಲ. ಅದು ಅನಾದಿ, ಅನಂತ. ಸಾವು ಅದರ ವಿಕಾಸಕ್ಕೆ ಸಹಕಾರಿ. ಸಾವಿನಂತೆ ಧರ್ಮವೂ ಅದರ ವಿಕಾಸಕ್ಕೆ ಸಹಕಾರಿ. ಅನೇಕ ಶಾಸ್ತ್ರಗಳೂ, ಮಹಾತ್ಮರ ಸಂದೇಶಗಳೂ ಈಗ ಅರ್ಥವಾದುವು, ನಾಣಿ. ಈ ತತ್ವದ ಹೊನಲಿನಲ್ಲಿ ವ್ಯಷ್ಟಿ ಪ್ರೇಮದ ಕಟ್ಟೊಡೆದು ಸಮಷ್ಟಿಯಲ್ಲಿ ಲೀನವಾಗಿದೆ. ಇದೊಂದು ಕಣಸು. ಹೌದು— ಕಣಸು."

ಶಿವನ ಮಾತು ಮುಗಿಯಿತು.

ಸಂಜೆ ಜಾರಿ ಇರುಳೇರಿತ್ತು. ಕಿಶೋರಚಂದ್ರನ ಮ್ಲಾನ ಜ್ಯೋತ್ಸ್ನೆಯನ್ನು ಹೊದೆದು ಮಂಜಿನ ತೆಳ್ಳನೆಯ ಪೊರೆಯ ಮುಸುಕಿನಲ್ಲಿ ಚಾಮುಂಡಿ ಬೆಟ್ಟ ಅವ್ಯಕ್ತವಾಗಿ ದಿಗಂತದಲ್ಲಿ ವಿಲೀನವಾಗಿತ್ತು. ಬೆಟ್ಟದ ದೀಪಗಳು ದೇವತೆಗಳ ಮೆರವಣಿಗೆಯ ದೀವಟಿಗೆಗಳಂತೆ ನಿರಾಧಾರವಾಗಿ ನಡುಬಾನಿನಲ್ಲಿ ಮಿನುಗಿ ಮಾಲೆಗೊಂಡಿದ್ದುವು. ಈ ಕಡೆ ವಾಯುವ್ಯದ ಮೂಲೆಯಲ್ಲಿ ಗಾಳಿಯಲ್ಲಿ ತೂಗುತ್ತಿರುವ ತೆಂಗಿನ ಮರದ ಎಲೆಗಳ ನಡುನಡುವೆ ಒಮ್ಮೊಮ್ಮೆ ನಕ್ಷತ್ರವೊಂದು ಮಿನುಗಿ ಮಾಯವಾಗುತ್ತಿತ್ತು. ಇವೆಲ್ಲವನ್ನೂ,

ನಮ್ಮ ಆತ್ಮವನ್ನೂ ಮುಸುಕಿದ್ದ ಮೌನ— ಅರಿವಿಗೆ ಮಾತಿನ ಸಂಕೋಲೆ ಯನ್ನು ಬಿಚ್ಚಿದ್ದ ಮೌನ! ಒಂದು ಕ್ಷಣದ ಹಿಂದೆ ಶಿವನ ತುಂಬುಕಂಠ ಈ ಮೌನವನ್ನು ತುಂಬಿತ್ತು. ಮಾತಿನ ಗುದ್ದಲಿಯಿಂದ ನನ್ನ ಅಜ್ಞಾನವನ್ನೂ ತನ್ನ ಸಂಶಯಗಳನ್ನೂ ಅಗೆದು ತೋಡಿ ತೋಡಿ ಭಾವಗಳ, ಜ್ಞಾನದ, ಚಿಲುಮೆಯನ್ನು ಚಿಮ್ಮಿಸಿದ ವಾಣಿಯದು. ಈಗ ಶ್ರಾಂತವಾಗಿ ಮೌನದ ಮಡಿಲಿನಲ್ಲಿ ಮಲಗಿತ್ತು. ಕಿರುಮನೆಯಲ್ಲಿದ್ದ ನಸುಬೆಳಕಿನಲ್ಲಿ ಶಿವನನ್ನು ನೋಡಿದೆ. ಮುಖದಲ್ಲಿ ಯೋಗಿಯ ಪರವಶತೆಯಿತ್ತು. ನೋಡಿ ಭಯ ವಾಯಿತು. ಕ್ಷಣಕ್ಷಣಕ್ಕೂ ಮನುಷ್ಯತ್ವವನ್ನು ದಾಟಿ, ದೂರ ದೂರ, ನನ್ನ ಕೈಗೆ ಎಟಕದೆ ದೇವತ್ವವನ್ನು ಮುಟ್ಟುವ ಈ ವಿಶ್ವ... ...ಬಿ ಎಲ್ಲಿ, ಈ ಆತ್ಮಜ್ಞಾನಿ ಎಲ್ಲಿ— ನಾನೆಲ್ಲಿ? ನನಗೂ ಅವನಿಗೂ ... ...ಬ...? ಏನೋ ಒಂದು ವಿಷಣ್ಣತೆ ನನ್ನ ಮನದಲ್ಲಿ ಮು... ನೋವು ಎದೆಯಲ್ಲಿ ಮೊಳೆಯಿತು. ಕಂಪಿತ ಸ್ವರದಿ... ಮೆಲ್ಲನೆ ಪಿಸುಮಾ... ನಲ್ಲಿ "ಶಿವು" ಎಂದೆ.

"ನಾಣು, ಹೊತ್ತಾಯಿತೆ ನಾಣು? ... ...ಯ್ಯ ಕಾಫಿ ತೆಗೆದು ಕೊಂಡು ಬಂದರೆ ನನಗೆ ಹೇಳಬೇಡವೆ? ... ...ಜಿನ ಗಡ್ಡೆಯಾಗಿ ...ೀಗಿದೆಯಲ್ಲ! ...? ಬೆಚ್ಚಗೆ ಮಾಡಿಕೊಂಡು ...

ನಾನು ಮಾ... ... ...ಹಿಡಿದು ...ುಕಿದೆ. ಸ್ಪರ್ಶ ಪ್ರ...

"ಬದುಕಿದೆ ಬಡ ಜೀ... ...ಂಡೆ.

---

# ಈ ಲೇಖಕರ ಇತರ ಕೃತಿಗಳು

ಪದ್ಯಸಂಗ್ರಹಗಳು

ಹಣತೆ
ಮಾಂದಳಿರು
ಶಾರದಯಾಮಿನಿ
ಗಣೇಶದರ್ಶನ
ರಸಸರಸ್ವತಿ
ಮಲೆದೇಗುಲ
...ದಯವಿಹಾರಿ

...ಕಗಳು

...ನಿ ಮತ್ತು ಇತರ ಚಿತ್ರಗಳು
ಧ್ವ... ಮತ್ತು ಇತರ ಕಥೆಗಳು
ಈ... ಮರದ ಕೆಳಗೆ
...ರಿಯ ನೆನಪು

[illegible]
ದ್ರೋಣ...
ಶಬರಿ
ವಿಕಟಕವಿ ವಿಜಯ
ವಸಂತಚಂದನ
ಹರಿಣಾಭಿಸರಣ

ಅನುವಾದಗಳು

ಭಗವದ್ಗೀತೆ : ಕನ್ನಡ ಪದ್ಯಾನುವಾದ
ಮಹಾಪ್ರಸ್ಥಾನ
ಸಿರಿಬಾಯ ನುಡಿ